ಮನೋಹರ ಗ್ರಂಥಮಾಲೆಯ ೪೨ನೆಯ ಕುಸುಮ

# ಮಾರ್ಗದರ್ಶಕ

(ಹದಿಮೂರು ಸಣ್ಣ ಕಥೆಗಳ ಸಂಗ್ರಹ)

ಬರೆದವರು:

ಎಂ. ವಿ. ಸೀತಾರಾಮಯ್ಯ

ಎಂ. ಎ.



ಮನೋಹರ ಗ್ರಂಥಪ್ರಕಾಶನ ಸಮಿತಿ

— ಧಾರವಾಡ —

ಜೂನ್ ೧೯೪೦  ಬೆಲೆ ೦-೧೪-೦

**ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :**

ಶ್ರೀ. ದ. ರಾ. ಬೇಂದ್ರೆ, ಎಂ. ಎ.
ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ.
ಶ್ರೀ. ವಿ. ಕೃ. ಗೋಕಾಕ, ಬಿ. ಎ. (ಆಕ್ಸಫರ್ಡ)

ಮುದ್ರಕರು
**ಕೆ. ಜಿ. ರಾಯದುರ್ಗ**
ಮೋಹನ ಮುದ್ರಣಾಲಯ
ಧಾರವಾಡ.

ಪ್ರಕಾಶಕರು :
**ಜಿ. ಬಿ. ಜೋಶಿ**
ಮನೋಹರ ಗ್ರಂಥಮಾಲಾ
ಧಾರವಾಡ



ಸಂಪಾದಕ :

**ಜಿ. ಬಿ. ಜೋಶಿ**

# ನಮ್ಮ ಮಾತು

## ಗ್ರಾಹಕರಲ್ಲಿ ಬಿನ್ನಹ:

ನಮ್ಮ ಗ್ರಂಥಮಾಲೆಯ ಏಳನೆಯ ವರುಷವು ಈ 'ಮಾರ್ಗದರ್ಶಕ'ಕ್ಕೆ ಮುಗಿಯಿತು. ಚಂದಾದಾರರು ದಯವಿಟ್ಟು ತಮ್ಮ ಚಂದಾ ಹಣವನ್ನು ಮನಿಯಾರ್ಡಿನಿಂದ ಕಳುಹಿ ನಮ್ಮನ್ನು ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇವೆ. ಮುಂದಿನ ಪುಸ್ತಕವು ಹೊರಡುವ ಮೊದಲು ಚಂದಾ ಹಣ ಬರದಿದ್ದಲ್ಲಿ ವಾಡಿಕೆಯಂತೆ ಆ ಪುಸ್ತಕವನ್ನು ಒಂದು ವರ್ಷದ ಚಂದಾ ಹಣಕ್ಕೆ ವ್ಹಿ. ಪಿ. ಮಾಡಿ ಕಳಿಸಲಾಗುತ್ತದೆ. ಚಂದಾದಾರರು ವ್ಹಿ. ಪಿ. ಸ್ವೀಕರಿಸಿ ನಮಗೆ ಸಹಾಯಮಾಡಬೇಕು. ಒಂದು ವೇಳೆ ವ್ಹಿ. ಪಿ. ಯನ್ನು ಸ್ವೀಕರಿಸಲು ಸಾಧ್ಯವಿರದಿದ್ದಲ್ಲಿ ದಯವಿಟ್ಟು ಮೊದಲಿಗೇ ಬರೆದು ತಿಳಿಸಿ ನಮ್ಮ ಅಂಚೆಯ ವೆಚ್ಚವನ್ನಾದರೂ ಈ ಮುಗ್ಗಟ್ಟಿನ ಕಾಲದಲ್ಲಿ ಉಳಿಸಿ ಸಹಾಯಮಾಡಬೇಕೆಂದು ನಮ್ಮ ನಮ್ರವಾದ ಪಾರ್ಥನೆಯಿದೆ.

## ಕೃತಜ್ಞತೆ:

ತಮ್ಮ 'ಮಾರ್ಗದರ್ಶಕ' ಎಂಬ ಈ ಸಣ್ಣಕತೆಗಳ ಸಂಗ್ರಹವನ್ನು ನಮ್ಮ ಮಾಲೆಯಲ್ಲಿ ಪವಣಿಸಲು ಕೊಟ್ಟ ಶ್ರೀಮಾನ್, ಎಂ. ವಿ. ಸೀತಾರಾಮಯ್ಯನವರಿಗೂ, ಇದಕ್ಕೊಂದು ಬೆಲೆಯುಳ್ಳ ಮುನ್ನುಡಿಯನ್ನು ಬರೆದು ಕೊಟ್ಟ ಶ್ರೀಮಾನ್, ದ. ರಾ. ಬೇಂದ್ರೆಯವರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಮಾರ್ಗದರ್ಶಕದ ಹೊದಿಕೆಯ ಚಿತ್ರವನ್ನೂ ಶ್ರೀಮಾನ್ ಎಂ. ವಿ. ಸಿ. ಯವರೇ ತೆಗೆದುಕೊಟ್ಟು ಗ್ರಂಥದ ಅಂದವನ್ನು ಹೆಚ್ಚಿಸಿದ್ದಾರೆ. ಅದಕ್ಕಾಗಿ ಅವರಿಗೆ ಮತ್ತೊಮ್ಮೆ ನಮ್ಮ ಕೃತಜ್ಞತೆ ಸೂಚಿಸುತ್ತೇವೆ.

—ಸಂಪಾದಕ

# ಬಿನ್ನಹ



ಕಥೆ ಬರೆಯಬೇಕೆಂಬ ಹಂಬಲು ನನ್ನಲ್ಲಿ ಮೂಡಿದ್ದು ನಾನು ಕಾಲೇಜು ತರಗತಿಗಳಲ್ಲಿ ವಿದ್ಯಾರ್ಥಿಯಾಗಿದ್ದಾಗ. ನನ್ನ ಮೊದಲ ಕಥೆ ಬರೆದದ್ದು ೧೯೩೭ರಲ್ಲಿ; ಕಡೆಯದು ಬರೆದದ್ದು ಕಳೆದ ವರ್ಷ. ಇಷ್ಟು ದೀರ್ಘಕಾಲದಲ್ಲಿ ಬರೆದಿರುವ ಕಥೆಗಳ ಸಂಖ್ಯೆ ಕಡಮೆಯೆ. ಬರೆದಿರುವಷ್ಟನ್ನಾದರೂ ಒಟ್ಟು ಕೂಡಿಸಿ ಪ್ರಕಟಿಸಬೇಕೆಂಬ ನನ್ನ ಬಯಕೆ ನನ್ನ ಪೂಜ್ಯಮಿತ್ರರಾದ ಶ್ರೀ. ದ. ರಾ. ಬೇಂದ್ರೆ ಅವರ ಒತ್ತಾಸೆಯಿಂದಲೂ ಮನೋಹರ ಗ್ರಂಥ ಮಾಲೆಯ ಸಂಪಾದಕರೂ ಒಡೆಯರೂ ಆದ ಶ್ರೀ. ಜಿ. ಬಿ. ಜೋಶಿಯವರ ಉಪಕಾರದಿಂದಲೂ ಫಲಿಸಿದೆ. ಇದಕ್ಕಾಗಿ ನಾನು ಇವರಿಗೆ ಅತ್ಯಂತ ಕೃತಜ್ಞ ನಾಗಿದ್ದೇನೆ. ಶ್ರೀ. ಬೇಂದ್ರೆಯವರು ನನ್ನ ಬೇಡಿಕೆಯಂತೆ ಮುನ್ನುಡಿ ಬರೆದು ಕೊಟ್ಟು, ಗ್ರಂಥದ ಬೆಲೆ ಹೆಚ್ಚಿಸಿ, ಹೆಚ್ಚಿನ ಉಪಕಾರ ಮಾಡಿದ್ದಾರೆ.

ಈ ಸಂದರ್ಭದಲ್ಲಿ ನಾನು ಇನ್ನಿಬ್ಬರು ಮಹನೀಯರ ಸ್ಮರಣೆ ಮಾಡದೆ ಇರಲಾರೆ: ಮೊದಲು, ಕನ್ನಡ ಸಣ್ಣ ಕತೆಯ ಪ್ರವರ್ತಕರೂ ನನ್ನಂಥ ಹಲವು ಕಿರಿಯ ಕಥೆಗಾರರಿಗೆ ಮಾರ್ಗದರ್ಶಕರೂ ಕನ್ನಡ ನಾಡಿನ ಹಿರಿಯ ಹೆಸರೂ ಆಗಿರುವ 'ಶ್ರೀನಿವಾಸ'ರನ್ನು ಭಕ್ತಿ, ಕೃತಜ್ಞತೆಯಿಂದ ನೆನೆಯು ತ್ತೇನೆ. ಅವರ 'ಕೆಲವು ಸಣ್ಣ ಕತೆಗಳು' ನನ್ನ ಎಸ್. ಎಸ್. ಎಲ್. ಸಿ. ಪರೀಕ್ಷೆಯ ಪಾಠಪುಸ್ತಕವಾಗಿತ್ತು. ಆ ಪುಸ್ತಕ ನಾನು ಅಂದಿನ ವರೆಗೆ ಓದದೆ ಇದ್ದ ಒಂದು ಹೊಸ ಬಗೆಯ ಪುಸ್ತಕವಾಗಿತ್ತು; ಅದರ ಕಥೆಗಳು ಒಮ್ಮೊದಲೇ ನನ್ನ ಮನಸ್ಸನ್ನು ಸೂರೆಗೊಂಡುವು; ಆ ವರ್ಷದ ನನ್ನ ಕನ್ನಡ ಪಾಠ ಸೊಗಸಿದ್ದು ಆ ಪುಸ್ತಕದಿಂದ; ಪರೀಕ್ಷೆಯ ಹೊತ್ತಿಗೆ ಒಮ್ಮೆ ಮಾತ್ರ ಕನ್ನಡ ಪುಸ್ತಕ ಓದುವ ರೂಢಿಯಿಟ್ಟಿದ್ದ ನಾನು ಈ ಪುಸ್ತಕವನ್ನು ಪಾರಾ ಯಣ ಮಾಡಿ ಬಿಟ್ಟಿದ್ದೆ; ಆ ವರ್ಷ ನನ್ನನ್ನು ಕನ್ನಡದಲ್ಲಿ ತೇರ್ಗಡೆ ಮಾಡಿ ಸಿದ್ದು ಬಹುಶಃ ಈ ಪುಸ್ತಕವೇ ಇರಬಹುದು! ಅದು ಹೇಗಾದರೂ ಇರಲಿ,

ಕಥೆ ಬರೆಯಬೇಕೆಂಬ ಹಂಬಲು ಹುಟ್ಟಿದ್ದಂತೂ ಈ ಪುಸ್ತಕ ಓದಿ ಮೆಚ್ಚಿದ ಮೇಲೆಯೇ. ಆ ಹಂಬಲು ಒಂದೆರಡು ವರ್ಷಕಾಲ ಹಾಗೆಯೇ ಹುದುಗಿಕೊಂಡಿತ್ತು; ಅದರ ಮೊದಲನೆಯ ಹೂವನ್ನು ಕನ್ನಡ ತಾಯ ಅಡಿಯೆಡೆಗೆ ಅರ್ಪಿಸಬಹುವೆಂದು ಧೈರ್ಯಕೊಟ್ಟು ಹುರಿದುಂಬಿಸಿದವರು ನನ್ನ ಗುರು-ಮಿತ್ರರಾದ ಶ್ರೀ. ತೀ. ನಂ. ಶ್ರೀಕಂಠಯ್ಯನವರು; ಉದ್ದಕ್ಕೂ ಇವರ ಒತ್ತಾಸೆಯ ಹೊಯ್‌ನೀರಿನಿಂದಲೆ ನನ್ನ ಕಥೆ ಬರೆಯುವುದು ಬೆಳೆದುಕೊಂಡು ಬಂದಿರುವುದು. ಅವರಿಗೆ ನನ್ನ ಕೃತಜ್ಞತೆ ಯಾವ ರೀತಿ ತಿಳಿಸಿದರೂ ಕಡಮೆಯೆ.

ಈ ಸಂಗ್ರಹದ ಕಥೆಗಳು ಎಂಟು ಒಂಬತ್ತು ವರ್ಷಗಳ ದೀರ್ಘಾವಧಿಯಲ್ಲಿ ಆಗೊಮ್ಮೆ ಈಗೊಮ್ಮೆ ಬರೆದವಾದ್ದರಿಂದ ಅವುಗಳಲ್ಲಿ ಮುಖ್ಯವಾಗಿ ಭಾಷೆಯ ದೃಷ್ಟಿಯಿಂದ ಒಂದೊಂದಕ್ಕೆ ವ್ಯತ್ಯಾಸ ಕಂಡುಬರಬಹುದು. ಯಾವ ಬಗೆಯ ಮಾರ್ಪಾಟನ್ನೂ ಮಾಡದೆ ಕಥೆಗಳನ್ನು ಮೊದಲು ಬರೆದಂತೆಯೇ ಪ್ರಕಟಿಸುತ್ತಿದ್ದೇನೆ.

ನನ್ನ ಕಥೆಗಳು ಹಲವು ಭಾವಪ್ರಧಾನವಾದುವೆಂದು ನನ್ನ ಭಾವನೆ. ವಾಸ್ತವ ಪ್ರಪಂಚವನ್ನು ಬಿಟ್ಟು ಬರಿಯ ಭಾವಗಳನ್ನು ಮಾತ್ರ ಚಿತ್ರಿಸಿದರೆ ಅವು ಕಥೆಯಾಗಲಾರವು; ಕಥೆ ಭಾವಪ್ರಧಾನವಾಗಿರಬಹುದು, ಅಷ್ಟೆ. ಕಥೆ ಭಾವಪ್ರಧಾನವಾಗಿರುವಲ್ಲಿ ಅದರಲ್ಲಿ ಬಳಸಿಕೊಂಡ ವಾಸ್ತವಿಕ ಸನ್ನಿವೇಶ ಸಂದರ್ಭ ಪಾತ್ರಗಳ ಬಣ್ಣ ಕೆಲವೆಡೆ ಏರಬಹುದು, ಕೆಲವೆಡೆ ಇಳಿಯಬಹುದು. ವಾಸ್ತವಿಕತೆ ಭಾವಗಳ ಪರಸ್ಪರ ಸಂಮಿಶ್ರಣದಲ್ಲಿ ಈ ಏರು ತಗ್ಗುಗಳು ಸಹಜ.

'ಮಾರ್ಗದರ್ಶಕ' ಎಂಬ ಕಥೆ ಹೊರತಾಗಿ ಎಲ್ಲವನ್ನೂ ಬರೆದ ಕಾಲಾನುಕ್ರಮದಲ್ಲಿಯೇ ಇರಿಸಿದ್ದೇನೆ.

'ಸೋದರರು' ಎಂಬ ಕಥೆ W. W. Gibson ಎಂಬವರ 'The Brothers' ಎಂಬ ಕವನವೊಂದರಿಂದ ಪ್ರೇರಿತವಾದದ್ದು.

ಕೊನೆಯ ಎರಡು ಕಥೆಗಳನ್ನು ಬಿಟ್ಟು ಉಳಿದುವೆಲ್ಲ ಮೈಸೂರು ವಿಶ್ವ ವಿದ್ಯಾನಿಲಯ ಯೂನಿಯನ್ ಪತ್ರಿಕೆ, ಕಥಾಂಜಲಿ, ಕತೆಗಾರ, ಪ್ರಜಾಮತ, ಸರಸ್ವತಿ, ಪ್ರಬೋಧಕ, ಸ್ವದೇಶಾಭಿಮಾನಿ ಮುಂತಾದ ಬೇರೆ ಬೇರೆ ಪತ್ರಿಕೆಗಳಲ್ಲಿ ಈ ಮೊದಲೆ ಪ್ರಕಟಗೊಂಡಿವೆ. ಆ ಪತ್ರಿಕೆಗಳ ಉಪಕಾರ ವನ್ನು ಈ ಸಂದರ್ಭದಲ್ಲಿ ನೆನೆಯುಬಯಸುತ್ತೇನೆ.

ಪುಸ್ತಕದ ಹೆಸರಿನ ವಿಷಯವಾಗಿ ಎರಡು ಮಾತು. ಈ ಕಥಾ ಪುಸ್ತಕ ಎಲ್ಲರಿಗೂ ಮಾರ್ಗದರ್ಶಕವಾಗಿರಬೇಕೆಂಬ ದುರಭಿಮಾನದಿಂದ ಇದನ್ನು 'ಮಾರ್ಗದರ್ಶಕ' ಎಂದು ಕರೆದಿಲ್ಲ. ಕಥೆ ಬರೆಯುವಲ್ಲಿ ವಾಸ್ತ ವಿಕತೆಯ ವಿನ್ಯಾಸಕ್ಕಿಂತಲೂ ಭಾವವಿನ್ಯಾಸದ ಕಡೆಗೆ ಇದ್ದ ನನ್ನ ಒಲವು ನನಗೆ ಮನವರಿಕೆಯಾದದ್ದು 'ಮಾರ್ಗದರ್ಶಕ' ಎಂಬ ಕತೆ ಬರೆದಾಗ; ನನ್ನ ಇತ್ತೀಚಿನ ಹಲವು ಕಥೆಗಳ ಕಥೆಗಾರಿಕೆಗೆ ಆ ಕಥೆ ಮಾರ್ಗದರ್ಶಕವಾಯ್ತು. ಆದ್ದರಿಂದ ನನ್ನ ಸ್ವತಂತ್ರ ಕಥೆಗಳ ಮೊತ್ತ ಮೊದಲನೆಯ ಸಂಕಲನವನ್ನು ಆ ಕಥೆಯ ಹೆಸರಿನಿಂದಲೇ ಕರೆಯಬೇಕೆನ್ನಿಸಿತು. ಸಂಕಲನದಿಂದ ನನ್ನ ಇದು ವರೆಗಿನ ಕಥೆಗಾರಿಕೆಯ ತಪ್ಪು-ಒಪ್ಪುಗಳು ನನಗೆ ತಿಳಿಯುವಂತಾಗಿ ಇದು ನನ್ನ ಮುಂದಿನ ಕಥೆಗಾರಿಕೆಗೆ ಮಾರ್ಗದರ್ಶಕವಾಗಲಿ ಎಂಬುದೇ ನನ್ನ ಹಾರೈಕೆ.

೧೧—೪—೧೯೪೦
ಬೆಂಗಳೂರ

ಎಂ. ವಿ. ಸೀತಾರಾಮಯ್ಯ

---

# ಮುನ್ನುಡಿ

'ಮಾರ್ಗದರ್ಶಕ'ದ ಲೇಖಕರಾದ ಮಿ. ಎಮ್. ವಿ. ಸೀತಾರಾಮು ಎಮ್. ಎ. ಯವರನ್ನು ನಾನು ಬಹಳ ದಿನಗಳಿಂದ ಬಲ್ಲೆ. ಅವರು ಕವಿಗಳು, ಕತೆಗಾರರು ಚಿತ್ರಕಾರರು.... ಅವರಲ್ಲಿ ಅನೇಕ ಕಲೆಗಳು ಶಾಖೆಯಾಗಿವೆ. ಅವುಗಳ ಸಂಗಮವನ್ನು ಅವರ ಕೃತಿಯಲ್ಲಿ ಕಾಣಬೇಕೆಂದು ಅವರ ಬೇರೆ ಅನೇಕ ಮಿತ್ರರಂತೆ ನನಗೂ ಆಸೆ. ಮನೋಹರ ಗ್ರಂಥಮಾಲೆಯವರು ಇಲ್ಲಿ ಸಂಗ್ರಹಿಸಿದ ಕತೆಗಳಲ್ಲಿ ಶ್ರೀ. ಸೀತಾರಾಮು ಅವರ ಭಾವಪ್ರವಣತೆ, ರೂಪ ನಿರ್ಮಿತಿ, ಕಥನಸದಾತುರತೆ ಎಲ್ಲವೂ ಒಡಮೂಡಿವೆ. ಮಾರ್ಗದರ್ಶಕವೂ ನಿಜವಾಗಿಯೂ ಈ ಕತೆಗಾರರ ಬೆಳವಣಿಗೆಯ ಮಾರ್ಗದರ್ಶನವನ್ನೆ ಮಾಡು ತ್ತಿದೆ. ಇಲ್ಲಿ ಕಥನಶಕ್ತಿಯ ಬೀಜವು ಮೊಳೆತು, ಎಲೆಬಿಟ್ಟು, ಕುಡಿಚಾಚಿ, ಹೂವಾಗಿರುವುದನ್ನು ಕಾಣಬಹುದು. ಆಧುನಿಕ ಸಾಹಿತ್ಯಸೃಷ್ಟಿಯ ಕಥಾ ಪೂರದಲ್ಲಿ ಈ ಸಂಗ್ರಹವೂ ಒಂದು ತರಂಗ.

‘ ಶ್ರೀನಿವಾಸ ’ರ ರಂಗಪ್ಪನ ಮದುವೆಯಾಗಿ, ದೀವಳಿಗೆ ಮಾಡಿಕೊಂಡು, ಕೋರ್ಟಶಿಪ್ ನಡಿಸಿದಂದಿನಿಂದ ಕನ್ನಡ ಸಂಸಾರವು ಬಹುಮುಖವಾಗಿ ಮಾತನಾಡುತ್ತಿದೆ. ಶ್ರೀ. ಸೀತಾರಾಮು ಅವರ ಸೃಷ್ಟಿಯೊಳಗಿನ ತರುಣ-ತರುಣಿಯರಲ್ಲಿ ನವತಾರುಣ್ಯದ ಭಾವ, ರಸ, ಆಭಾಸಗಳು ಚಮತ್ಕಾರವಾಗಿ ವ್ಯಕ್ತವಾಗಿರುವವು. ಇಲ್ಲಿಯ ಸೆಳವಿನ ಭಾವಪ್ರವಾಹವು ಆಳವಿಲ್ಲದ ಕಾಲು ಹೊಳೆಯಾಗಿ ತೋರಬಹುದು. ಘನತೆಗೇನೋ ಉದ್ದಗಲ ಆಳಗಳು ಬೇಕು. ಆದರೆ ಜೀವನದ ಜೀವಿತ್‌ಸ್ವರೂಪವೂ ರಸಾದ್ರತೆಯಲ್ಲಿ ಇದೆ. ಈ ಕತೆಗಳಲ್ಲಿ ಅದು ಇದೆ; ಅದಲ್ಲದೆ ಒಂದು ಅನುಭವಪರಿಪಾಕಕ್ರಮವೂ ಇಲ್ಲಿ ಕಾಣುತ್ತದೆ. ಕಸೆಮುತ್ತಿನ ಸ್ನೇಹವೂ ಪ್ರೀತಿಕಥಾವಲ್ಲಿಯು ತುಂಬೆಲ್ಲ ತುರುಗಿದ್ದರೂ, ಕೊನೆಕೊನೆಗೆ ಪಾಡಿಗೆ ಬಂದ ಫಲ ರಸವಾರಿ ತೊಟ್ಟುಚ್ಚಿ ಬೀಳುವಂತೆ, ಪ್ರೇಮದ ತ್ಯಾಗ, ಸಾಕ್ಷಿತ್ವ ನಿರ್ವಿಷಯತೆಗಳು ಕಡೆಸಡೆಯ ಕತೆಗಳಲ್ಲಿ ತಲೆದೋರಿವೆ.

ಹೌದು. ಕತೆಗಾರರೇ ಹೇಳಿದಂತೆ ‘ಪಕ್ವವಾದ ಅನುಭವಕ್ಕೆ ಮುಪ್ಪೇ ತಕ್ಕ ರೂಪು.’ ಶ್ರೀ ಸಿತಾರಾಮು ಅವರು ಇನ್ನೂ ತರುಣರು, ಅವರ ವಸ್ತುವಿಗೆ ಸೊನೆ, ಒಗರು, ಹುಳಿಯಿರುವದು ಸ್ವಾಭಾವಿಕ. ಹುಡುಗನ ಪ್ರಾಯದ ಕನಸು, ಪ್ರಾಯದ ಹುಡುಗತನ, ಕತೆಗಾರನ ರಸಿಕತೆ, ರಸಿಕನ ಉದಾರ ಭಾವ ಇವು ಇಲ್ಲಿಯ ಕತೆಗಳಲ್ಲಿ ಎಳೆ ಎಳೆಗಳಾಗಿ ಸೇರಿ ‘ ಷೋಕಿ ’ನ ಕೃತ್ರಿಮತೆಯೊಡನೆ ಪ್ರಾಯದ ಸಹಜಮಾಧುರ್ಯವನ್ನು ಬೀರುತ್ತಿವೆ. ಪಕ್ವ ಅನುಭವದ ರುಚಿಯೇನೋ ಅಭಿಲಷಣೀಯವೇ ಸರಿ. ಆದರೆ ಹದ ತಪ್ಪಿದರೆ ವಿಲಾಸದ ರಸವು ಪಥ್ಯದ ಕಟ್ಟಾಗುವದುಂಟು. ತರುಣರಾದ ಶ್ರೀ ಸೀತಾರಾಮು ಅವರು ತಮ್ಮ ಕಲೆಗಾರಿಕೆಯ ಬಹುರುಚಿಯ ಫಲಗಳನ್ನು ಇನ್ನೂ ಅನೇಕಕಾಲ ಕನ್ನಡ ಜನಕ್ಕೆ ನೀಡಲಿ. ಮುಪ್ಪು-ಪರಿಪಕ್ವತೆ ಬರುವಂದು ಬರಲಿ. ಈಗ ಆ ಅವಸರವಿಲ್ಲ.

ಸಾಧನಕೇರಿ }
೧-೫-೪೦ } ದ. ರಾ. ಬೇಂದ್ರೆ.

# ಪರಿವಿಡಿ




| | | |
|---|---|---|
| ೧ | ಮಾರ್ಗದರ್ಶಕ .. .. .. .. | ೧ |
| ೨ | ಕಥೆಗಾರ ಚಂದು .. .. .. .. | ೧೬ |
| ೩ | ನಂಬಿದರೆ ನಂಬಿ ಬಿಟ್ಟರೆ ಬಿಡಿ .. .. .. | ೨೯ |
| ೪ | ಬಗೆದಂತೆ ಬಾಳು .. .. | ೩೬ |
| ೫ | ಸರೋಜಳ ಬೊಂಬೆ .. .. .. .. | ೫೫ |
| ೬ | ಸೋದರರು .. .. .. .. | ೫೯ |
| ೭ | ಹುಚ್ಚನ ಹಂಬಲು .. .. .. .. | ೬೬ |
| ೮ | ಅವಳ ನೆನಪು .. .. .. .. | ೭೮ |
| ೯ | ಕುರುಡು ಪ್ರೇಮ–ಮೂಕಪ್ರೇಮ ! .. .. | ೮೫ |
| ೧೦ | ಪ್ರೇಮಪರೀಕ್ಷೆ. .. .. .. .. | ೯೧ |
| ೧೧ | ಕಳ್ಳ ರಂಗ .. .. .. .. .. | ೧೦೬ |
| ೧೨ | ಗೋಪಿಯ ಗೆಲವು .. .. .. .. | ೧೧೪ |
| ೧೩ | ಕುಮುದೆ .. .. .. .. .. | ೧೩೨ |




ಮನೋಹರ ಗ್ರಂಥಮಾಲೆಯ ೪೩ನೆಯ ಕುಸುಮ

ಎಂಟನೆಯ ವರುಷದ ಮೊದಲನೆಯ ಕುಸುಮ

# ಮೂಕ ಬಲಿ

(ಸಾಮಾಜಿಕ ಸ್ವತಂತ್ರ ಕಾದಂಬರಿ)

ಬರೆದವರು:

'ಜಡಭರತ'

ಮನೋಹರ ಗ್ರಂಥಮಾಲೆಯ ೪೩ನೆಯ ಕುಸುಮ

## ಮುಂದಿನ ಕುಸುಮ

# ಗಾಳಿಗೋಪುರ

ಆಕಾಶ ನೋಡಿ ನಡೆದಾಗ ಹಳ್ಳಕ್ಕೆ ಬಿದ್ದ
ಒಬ್ಬ ಯುವಕನ ಕಥೆ

ಬರೆದವರು :

**ನಾ. ಕಸ್ತೂರಿ**

---

**ವಿ. ಸೂ.:** ಇದೇ ಪುಸ್ತಕದಲ್ಲಿ ಬೇರೆ ಕಡೆಗೆ '**ಮೂಕಬಲಿ**'ಯು ಮುಂದಿನ ಕುಸುಮ ಎಂದು ಪ್ರಕಟಿಸಿದ್ದೇವೆ. ಆದರೆ ಮೊದಲನೆಯದಾಗಿ '**ಗಾಳಿಗೋಪುರ**' ಬರುವುದು. ಆಮೇಲೆ 'ಮೂಕಬಲಿ' ಬರುವುದು.

—ಸಂಪಾದಕ.

# ತಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೯ | ೧೫ | ತಬ್ಬಿಲಿ | ತಬ್ಬಲಿ |
| ೧೮ | ೨೧ | ಕುಂಜದಳನೇತ್ರೆ | ಕಂಜದಳನೇತ್ರೆ |
| ೨೬ | ೯ | ಫಿರಂಗಿಯುವನು | ಫರಂಗಿ— |
| ೩೦ | ೧೧ | ಪ್ರಾಣಸಂಕಟ | ಪ್ರಾಣಕಂಟಕ |
| ೪೦ | ೨೬ | ಸಾಕಾಗುಷ್ಟಾದರೂ | ಸಾಕಾಗುವಷ್ಟಾದರೂ |
| ೪೪ | ೨೨ | ಮತ್ತು | ಮತ್ತೆ |
| ೭೦ | ೫ | ಹೆಂಡ್ತಿ ಬಂದಿಲ್ಲ. ಬಂದಿಲ್ಲ | ಹೆಂಡ್ತಿ ಬಂದ್ರು . .ಬಂದ್ರು |
| ೭೯ | ೨ | ಕಮಲೆಯುು | ಕಮಲೆಯು |
| ೯೨ | ೭ | ನಿಯಬದ್ಧಳಾಗಿಯೂ | ನಿಯಮಬದ್ಧ— |
| ೧೧೭ | ೪ | ಸ್ವಲ ಕಾಯಿಸಬೇಕು | ಸ್ವಲ್ಪ ಕಾಫಿ— |
| ೧೧೮ | ೨೦ | ಕಣ್ಣಾರೆ ಕಂಡು ಹಾಗೆ | ಕಣ್ಣಾರೆ ಕಂಡ— |
| ೧೨೬ | ೫ | ಎಂದೊಂದೂ | ಎಂದೆಂದೂ |
| ೧೩೪ | ೧ | ಕುಮದ | ಕುಮುದ |
| ೧೪೨ | ೧೭ | ಪೂರೆಗಟ್ಟಿತ್ತು | ಪೊರೆಗಟ್ಟಿತ್ತು |

[ಮೇಲೆ ಕೆಲವು ಅನರ್ಥಕಾರಕ ಅಚ್ಚಿನ ತಪ್ಪುಗಳನ್ನು ಮಾತ್ರ ಎತ್ತಿಕೊಟ್ಟಿದೆ]

# ಮಾರ್ಗದರ್ಶಕ   

ಆಷಾಢಮಾಸ. ಸಂಜೆ ಏಳು ಗಂಟೆಯ ಸಮಯ. ಹಿಂದೆ ಸಂಜೆಗೊಂದು ಸೊಂಪು ಬೀರುತ್ತಿದ್ದ ಪಡುವಲದೆಸೆ ರಾಗರಹಿತವಾಗಿದೆ. ವಿಶಾಲ ನೀಲಮೇಘಪಟವೊಂದು ಅದೇ ದೆಸೆಯನ್ನು ನಿರಂತರವಾಗಿ ಮುಚ್ಚಿದೆ. ಒಮ್ಮೊಮ್ಮೆ ಮಾತ್ರ ಆ ಮುಗಿಲ್ದೆರೆಯ ಹರುಕಿನಲ್ಲಿ ಬಾಲಚಂದ್ರನ ಧವಳಚ್ಛಾಯೆ ಸ್ಫುಟಗೊಂಡು, ಮಬ್ಬಾಗಿ, ಮಾಯವಾಗುತ್ತಿದೆ.

ಇದೇನು, ರೋದನಧ್ವನಿ?—ಬಟ್ಟಬಯಲಿನಲ್ಲಿ ‘ಭಯ್ಯೋ ಭಯ್ಯೋ’ ಎಂದು ನಿಲುವಿಲ್ಲದೆ ಬೀಸುತ್ತಿರುವ ಆಷಾಢಮಾಸದ ಗಾಳಿಯದಿರಬೇಕು. ಪ್ರಕೃತಿಗೂ ನಗೆಗಾಲವೊಂದು, ಅಳುಗಾಲವೊಂದು. ಆ ರೋದನವು ಪ್ರಕೃತಿದೇವಿಯ ನಿಟ್ಟುಸಿರು.

ಪ್ರಕೃತಿಯ ನಿಟ್ಟುಸಿರು!—ಆದರೆ. . . . ನಡುನಡುವೆ ಅಸ್ಫುಟವಾಗಿ ನುಡಿಗಳು ಬೇರೆ ಕೇಳುತ್ತಿವೆ: ‘ಅಯ್ಯೋ, ದೇವರೆ; ವಿಧಿಯೇ! ದಾರಿತೋರು, ದಾರಿತೋರು!’

ಬಟ್ಟಬಯಲಿನ ನಡುವೆ ಯಾರೋ ನೆಲದ ಮೇಲೆ ಮೊಗವಿಟ್ಟು ರೋದಿಸುತ್ತಿದ್ದಾರೆ. ಯಾರಿರಬಹುದು? ಮತ್ತೆ ಯಾರು—ಯಾರೋ ಮನನೊಂದ ಮಾನವಪ್ರಾಣಿ. ನಿರ್ಜನಪ್ರದೇಶದಲ್ಲಿ—ಎಲ್ಲಿ ತನ್ನ ಹೃದಯದ ಅಳಲೆಲ್ಲವನ್ನೂ ಅಶ್ರುರೂಪವಾಗಿ ಹರಿಸಬಹುದೋ, ಎಲ್ಲಿ ತನ್ನ ಕಣ್ಣೀರೆಂಬ ಕಾಲಕೂಟವು ಇತರರ ಆನಂದಾಮೃತವನ್ನು ಕೆಡಿಸುವುದಿಲ್ಲವೋ, ಎಲ್ಲಿ ಜಗಜ್ಜನನಿಯ ಸಹಾನುಭೂತಿ ದೊರೆಯುವುದೋ ಅಂಥ ನಿರ್ಜನಪ್ರದೇಶದಲ್ಲಿ ಆ ಭೂಮಿತಾಯಿಯ ಮಡಿಲಿನಲ್ಲಿ ಮಲಗಿ ಶಾಂತಿಯನ್ನರಸುತ್ತಿದ್ದಾನೆ.

ಸ್ವಲ್ಪ ಹೊತ್ತಾಯಿತು. ಗಾಳಿಯ ರೋದನವೂ ನಿಂತಿತು; ಅವನ ರೋದನವೂ ನಿಂತಿತು. ಬಾಲಚಂದ್ರನು ಮೆಲುಮೆಲನೆ ಬೆಳಗತೊಡಗಿದನು.

ಯಾರೋ ಬಂದು, ಮಲಗಿರುವವನನ್ನು—'ಯಾಕಪ್ಪ, ಚಳಿಗಾಳಿಯಲ್ಲಿ, ಈ ಬಯಲಿನಲ್ಲಿ ಒಬ್ಬನೇ ಮಲಗಿರುವೆ?' ಎಂದು ಬೆನ್ನುತಟ್ಟಿ ಎಬ್ಬಿಸಿದರು. ಮಲಗಿದ್ದವನು ಎದ್ದು ಕುಳಿತು ಕತ್ತೆತ್ತಿ ನೋಡಿ, ಬಂದವನನ್ನು ಕಂಡು ಬೆರಗಾದವನಂತೆ ಸ್ವಲ್ಪ ಹೊತ್ತು ಮೌನವಾಗಿದ್ದು—

'ನೀನು . . ಮುದುಕ!—ಇಲ್ಲಿಗೇಕೆ ಬಂದಿರುವೆ—ಈ ಹೊತ್ತಿನಲ್ಲಿ,—ಒಬ್ಬನೇ?' ಎಂದು ತಡವರಿಸುತ್ತಾ ಕೇಳಿದನು.

'ಹೌದು. ನಾನು ಮುದುಕ. ಮುದುಕನಾದರೇನು? ನನಗೆ ಈ ಜಾಗ ಹೊಸದಲ್ಲ. ನೀನಾದರೋ ನಡುಹರೆಯದವನು. ಇಲ್ಲೇಕೆ ಒಬ್ಬನೇ ಹಾಗೆ ಮಲಗಿದ್ದೆಯಲ್ಲ? ಇದೇನು, ಕಣ್ಣೀರು? ಕಾರಣ?'

'ದಾರಿಹೋಕ, ನನ್ನ ಪುರಾಣ ಕಟ್ಟಿಕೊಂಡು ನಿನಗೇನು? ನಿನ್ನ ದಾರಿ ಹಿಡಿದು ಹೋಗು.'

'ನನ್ನ ದಾರಿ ಹಿಡಿದು ಹೋಗುತ್ತೇನೆ, ಸರಿಯೆ. ದಾರಿತೋರು ದಾರಿತೋರು ಎಂದು ಯಾರೋ ಚೀರಿದಂತಾಯಿತು. ನನ್ನ ದಾರಿಯಲ್ಲಿ ಹೋಗುತ್ತಿದ್ದವನು ಇತ್ತ ಬಂದೆ. ದಾರಿ ತಪ್ಪಿರುವೆಯಾ? ದಾರಿ ತೋರಿಸಲೇನು?'

ಯುವಕನು ಒಂದುಸಲ ಗಹಗಹಿಸಿ ನಕ್ಕನು: 'ದಾರಿ ತಪ್ಪಿಲ್ಲ, ದಾರಿ ಗೊತ್ತಿದೆ. ಅತ್ತ ಒಂದು ಮೈಲಿ ನಡೆದರೆ ಊರು ಸಿಕ್ಕುತ್ತದೆ.'

'ಅದಲ್ಲ ಮಗೂ, ನಿಜವಾಗಿಯೂ ನಿನಗೆ ದಾರಿತೋರುತ್ತೇನೆ. ನನ್ನ ಕೆಲಸವೇ ಅದು. ನೀನು ಇಲ್ಲಿ ಕುಳಿತು ರೋದಿಸುವುದಕ್ಕೆ ಕಾರಣವೇನು?'

'ಅಯ್ಯೋ ಮುದುಕ! ನಿನ್ನಿಂದ ಏನಾದೀತು?'

'ಪಕ್ವವಾದ ಅನುಭವಕ್ಕೆ ಮುಪ್ಪೇ ತಕ್ಕ ರೂಪ. ಮುದುಕನಂತೆ ಕಾಣುತ್ತೇನೆ ಅಷ್ಟೆ. ನನ್ನ ಶಕ್ತಿ ನಿನಗೇನು ಗೊತ್ತು.'

'ಹಾಗಾದರೆ ನೀನಾರು?'

'ನನ್ನ ಪರಿಚಯ ನಿನಗೆ ಸ್ವಲ್ಪವಿದೆ, ಮರೆತಿದ್ದೀಯೆ.'

'ಮರೆತಿರುವೆನೇ?—ನೆನಪಿಲ್ಲ. ಅರಂಬಗಾರರಂತೆ ಕಾಣುವೆಯಲ್ಲಾ! ಯಾವುದು ನಿನ್ನ ಜಾತಿ, . . ಕೆಲಸ?'

'ನನಗೆ ಜಾತಿಯೂ ಇಲ್ಲ, ಕುಲವೂ ಇಲ್ಲ; ಕಸಬು ಮೊದಲೇ ಇಲ್ಲ. ನಾನು ಯಾರೆಂಬುದು ನಿನಗೆ ನೆನಪಿಲ್ಲ. ಹೋಗಲಿ. ನಿನಗೆ ನನ್ನ ಪರಿಚಯ ನಿಧಾನವಾಗಿ ಆಗುತ್ತದೆ; ಏಳು ಹೋಗೋಣ. ದಾರಿಯಲ್ಲಿ ಎಲ್ಲವನ್ನೂ ವಿಶದವಾಗಿ ಹೇಳುವೆಯಂತೆ.'

'ಇಲ್ಲ, ನಾನು ಈ ಜಾಗವನ್ನು ಬಿಟ್ಟು ಕದಲಲಾರೆ. ಇಲ್ಲಿ ನನ್ನ ಮುದ್ದುಮಗುವನ್ನು ಮಲಗಿಸಿದ್ದೇನೆ.'

'ಹಾಗಾದರೆ ನಿನ್ನ ಮಗುವೆಲ್ಲಿ ಬಂತು, ಅದು ಒಂದು ಹಿಡಿ ಮಣ್ಣು. ಮೇಲೇಳು.'

'ಇಲ್ಲ, ಏಳಲಾರೆ; ಏಳುವುದಿಲ್ಲ.'

'ಹಾಗಾದರೆ..'

'ನನ್ನ ಆ ಹಿಡಿಮಣ್ಣಿನೊಡನೆ ನಾನೂ ಮಣ್ಣಾಗಿ ಬೆರೆಯುತ್ತೇನೆ.'

'ಅದು ಅಸಾಧ್ಯ; ಈಗ ಈ ಪ್ರದೇಶ ನಿರ್ಜನವಾಗಿದೆ. ಬೆಳಗಾದ ಮೇಲೆ ಇಲ್ಲಿ ಯಾರಾದರೂ ನಿನ್ನನ್ನು ಕಂಡೇ ಕಾಣುವರು. ಕಂಡಮೇಲೆ ನಿನ್ನನ್ನು ದುಃಸ್ಥಿತಿಯಲ್ಲಿ ಬಿಡುವುದಿಲ್ಲ, ಊರಿಗೆ ಕರೆದುಕೊಂಡು ಹೋಗುವರು. ಆಮೇಲೆ ನಿನ್ನನ್ನು ಬಿಡರು. ಅಷ್ಟೆಲ್ಲಾ ಏಕೆ? ಅಲ್ಲದೆ—ಚಳಿ, ಗಾಳಿ; ರಾತ್ರಿಯೆಲ್ಲ ಅನ್ನವಿಲ್ಲ..'

'ಮೂರು ದಿವಸದಿಂದ ಉಪವಾಸವಿರುವವನಿಗೆ ರಾತ್ರಿ ಅನ್ನವಿಲ್ಲದಿದ್ದರೇನು? ಮೊನ್ನೆಯ ರಾತ್ರಿ ನನ್ನ ಮಗುವಿನ ಪಕ್ಕದಲ್ಲಿಯೇ ಮಲಗಿದ್ದೆ. ನಿನ್ನೆಯ ರಾತ್ರಿಯೂ ಮಲಗಿದ್ದೆ. ಇಂದಿನ ರಾತ್ರಿಯೂ ಇಲ್ಲಿಯೇ ಮಲಗುವೆನು. ಬೆಳಗ್ಗೆ ನನ್ನನ್ನು ಯಾರು ಕಂಡರೆ ತಾನೆ ಏನು? ಯಾರೂ ನನ್ನನ್ನು ದೀರ್ಘನಿದ್ರೆಯಿಂದ ಎಬ್ಬಿಸಲಾರರು.'

ಮುದುಕನು ನಗುತ್ತಾ ಹೇಳಿದನು: 'ನಿನಗೆಲ್ಲೋ ಭ್ರಾಂತಿ. ಹೊಟ್ಟೆಗೆ ತಿನ್ನದೆ ಮಲಗಿದ ಮಾತ್ರಕ್ಕೆ ಸಾಯುವೆಯೆಂದು ತಿಳಿದಿರುವೆಯೇನು? ನೀನು ಮೂಢ! ಮನೆಗೆ ಹೋಗು. ಹೊಟ್ಟೆಯ ತುಂಬ ತಿನ್ನು. ಸುಖವಾಗಿ ನಿದ್ರಿಸು. ಈ ದೇಹದಂಡನೆಯೇಕೆ?'

'ಹೊಟ್ಟೆ! ನಿದ್ರೆ! ಸುಖ! ಹಹ್ಹಹ! ಸುಖ, ಸುಖ! ಅವಳು..

ಸನ್ನ . . ನನ್ನ ಮಗು - ಇವರಿಲ್ಲದಿರಲು ಎಲ್ಲಿಯ ಸುಖ ? ನಾನು ಬದುಕಿರಲಾರೆ. ಈ ದುಃಖದ ಪ್ರಪಂಚದಲ್ಲಿ ನಾನು ಬದುಕಿರಲಾರೆ. '

' ಹಾಗಾದರೆ ಸಾಯಲೂ ಆರೆ. ನೀನು ಹಿಡಿದಿರುವ ದಾರಿ ತಪ್ಪು. '

' ಸರಿಯಾದ ದಾರಿ ಯಾವುದು ? '

' ನನ್ನ ಹಿಂದೆ ಬಾ, ತೋರಿಸುತ್ತೇನೆ. '

' ಮುದ್ದುಗಿಣಿಯನ್ನು ಬಿಟ್ಟು ಬರಲಾರೆನಲ್ಲಾ. '

' ಹೇಗಿದ್ದರೂ ಬಿಡಬೇಕು—ನೀನು ಮನೆಗೆ ಹೋಗಬೇಕು, ಇಲ್ಲದಿದ್ದರೆ ನನ್ನ ಹಿಂದೆ ಬರಬೇಕು. '

ಮುದುಕನು ಮುಂದೆ ನಡೆದು ಹೋದನು; ಯುವಕನು ಅವನನ್ನು ಹಿಂಬಾಲಿಸುತ್ತಿದ್ದನು. ಆ ಮುದುಕನು ಹಳ್ಳ ತಿಟ್ಟು ಒಂದನ್ನೂ ನೋಡದೆ ಅಲ್ಲಿ ಬಳಸಿಕೊಂಡು ವಕ್ರವಕ್ರವಾಗಿ ಹಾರಿ ಹೋಗುತ್ತಿದ್ದನು; ತರುಣನೂ ಅವನ ಹಿಂದೆಯೇ ಅವನ ನೆರಳಿನಂತೆ ಸಾಗುತ್ತಿದ್ದನು. ತಿಂಗಳ ನಸುಬೆಳಕು ಮಸಕುಮಸಕಾಗಿ ದಾರಿತೋರುತ್ತಿದ್ದಿತು.

ಮುದುಕನು ಒಂದು ಕಡೆ ನಿಂತನು. ಯುವಕನೂ ಪಕ್ಕದಲ್ಲಿ ನಿಂತನು.

ಮುದುಕನು ಕೇಳಿದನು : ' ಇದೋ ನೋಡಿಲ್ಲಿ. ನಿನ್ನ ಮುಂದೆ ಕಾಣುವುದೇನು ? '

ಯುವಕನು ಅನುಮಾನಪಡುತ್ತಾ—' ಕೊಳವಲ್ಲವೆ ! ' ಎಂದನು.

' ಅನುಮಾನವೇಕೆ ? ಕಾಣುವುದಿಲ್ಲವೆ ? '

' ಅನುಮಾನವಲ್ಲ. ಹಿಂದೊಮ್ಮೆ ಇದೇ ಕೊಳಕ್ಕೆ ನಾನು ಬಂದಿದ್ದೆ.

' ಎಂದು ? ಏತಕ್ಕೆ ? '

' ಹೇಳಲಾರೆ—ಬಾಯಿಬರುವುದಿಲ್ಲ. '

' ಧೈರ್ಯ ತಂದುಕೋ, ಹೇಳು. '

ಇಬ್ಬರೂ ಒಂದು ಹಾಸುಗಲ್ಲಿನ ಮೇಲೆ ಕುಳಿತರು. ಯುವಕನು ಹೇಳತೊಡಗಿದನು :

' ಅದು ಹೋದ ವರ್ಷದ ಮಾತು.

' ನಾನು ಕೆಲಸಕ್ಕೆ ಸೇರಿ ಐದಾರು ವರ್ಷವಾಗಿತ್ತು. ಆದರೂ ಹನ್ನೆ

ರಡು ರೂಪಾಯಿ ಸಂಬಳ. ಸಂಸಾರ ನಾನು ನನ್ನ ಹೆಂಡತಿ ಇಬ್ಬರೇ. ಆದರೂ ಸುಖವಾಗಿದ್ದೆವು.

'ನನಗೆ ಆಸೆ ಹೆಚ್ಚಿತು—ಇನ್ನು ಸ್ವಲ್ಪ ಹೆಚ್ಚು ಸಂಬಳ ಮಾಡಿಕೊಂಡು ಚೆಲುವೆಯಾದ ಹೆಂಡತಿಗೆ ಒಡವೆ ವಸ್ತ್ರ ತಂದುಕೊಟ್ಟು, ಸುಖವಾಗಿ ಜೀವಿಸ ಬೇಕೆಂದು ಅನ್ನಿಸಿತು. ಬಂದ ಹಣದಲ್ಲಿ ಹೇಗೋ ಜೀವನ ನಡಸಬಹು ದಾಗಿದ್ದರೂ ಸಾಲಕ್ಕೇ ಎರಡು ಮೂರು ರೂಪಾಯಿ ಹೋಗುತ್ತಿತ್ತು. ಸಂಬಳ ಹೆಚ್ಚಿಸಬೇಕೆಂದು ಅಧಿಕಾರಿಗಳನ್ನು ಬೇಡಿಕೊಂಡೆ. ಮೈಸೂರಿಗೆ ಹೋಗಿ 'ಟ್ರೇನಿಂಗ್' ಪರೀಕ್ಷೆ ಮಾಡು, ಸಂಬಳ ಹೆಚ್ಚು ಮಾಡುತ್ತೇವೆ ಎಂದರು. ನನ್ನ ಹೆಂಡತಿಗೆ ಈ ವಿಷಯ ತಿಳಿಸಿದೆ. 'ಟ್ರೇನಿಂಗೂ ಬೇಡ ಏನೂ ಬೇಡ; ಮೈಸೂರು ಸಂಸಾರ ಸಾಮಾನ್ಯವೇ; ಇದ್ದದ್ದರಲ್ಲೇ ಹೇಗೋ ಕಾಲ ಕಳೆದರಾಯಿತು' ಎಂದುಬಿಟ್ಟಳು. ಅವಳ ಸ್ವಭಾವವೇ ಅಂತಹುದು— ಯಾವಾಗಲೂ ಇದ್ದದ್ದರಲ್ಲೆ ತೃಪ್ತಿ. ಒಂದು ದಿವಸವಾಗಲಿ, ನನಗೆ ಅದು ಬೇಕು ಇದು ಬೇಕು ಎಂದು ನನ್ನನ್ನು ಪೀಡಿಸಿದವಳಲ್ಲ. ಅಯ್ಯೋ, ಇನ್ನವ. ಳಿಲ್ಲ!' ಎಂದು ಗೋಳಿಡಲು ಮೊದಲು ಮಾಡಿದನು.

ಮುದುಕನೂ ಒಮ್ಮೆ ನಿಟ್ಟುಸಿರು ಬಿಟ್ಟು ಮೌನವಾಗಿ ಕುಳಿತನು.

ಯುವಕನು ಮತ್ತೆ ಮೊದಲುಮಾಡಿದನು :

'ಅಧಿಕಾರಿಗಳೇನೋ ನನ್ನನ್ನು ಕೂಡಲೆ ಮೈಸೂರಿಗೆ ಶಿಕ್ಷಣ ಪಡೆ ಯಲು ಕಳುಹಿಸಿಕೊಡಲಿಲ್ಲ. ಎರಡು ವರ್ಷ ಕಾದೆ. ನನ್ನ ಹೆಂಡತಿ ಪೀಡೆಯೇ ತೊಲಗಿತೆಂದಳು. ಆದರೆ ನಾನು ಅವಳಿಗೆ ಗೊತ್ತಿಲ್ಲದಂತೆ ಪ್ರಯತ್ನಪಟ್ಟು ಗೆದ್ದೆ. ನನ್ನನ್ನು 'ಟ್ರೇನಿಂಗಿ'ಗೆ ಆರಿಸಿದರು.

'ನನ್ನ ಹೆಂಡತಿಗೆ ಇಷ್ಟವಿಲ್ಲ. ಆದರೂ ಅವಳನ್ನು ಎಳೆದುಕೊಂಡೇ ಹೋದೆ. ಪ್ರತಿಯಾಡದೆ ಒಡಗೂಡಿ ಬಂದಳು.

'ಮೈಸೂರಿಗೇನೋ ಹೋದದ್ದಾಯಿತು. ವಾಸಕ್ಕೆ ಮನೆ ಬೇಗ ಸಿಕ್ಕಲಿಲ್ಲ. ಆ ಸುಂದರನಗರದಲ್ಲಿ ಮನೋಹರಮಂದಿರಗಳೆಷ್ಟೋ ಇದ್ದುವು. ಆದರೆ ನಮಗೆ ಬೇಕಾಗಿದ್ದುದೊಂದು ಗೂಡು.

'ಆ ಗೂಡೂ ಸಿಕ್ಕಿತು—ಒಂದು ಗಲ್ಲಿಯಲ್ಲಿ. ನರಕವಾಸವಾದರೂ ಲೇಸು. ಅಲ್ಲಿಯ ವಾಸವನ್ನು ಹೇಳಿ ತೀರದು.

'ಊರು ಹೊಸದು, ಯಾರೂ ಪರಿಚಯದವರಿಲ್ಲ; ಒಂದು ಕಾಸು ಸಾಲವೂ ಹುಟ್ಟುವಹಾಗಿರಲಿಲ್ಲ. ಬರುವ ಸಂಬಳ ಹನ್ನೆರಡು ಹೆಸರಿಗೆ. ಮನೆ ಬಾಡಿಗೆ ಎಲ್ಲಾ ಕಳೆದು ಕೈಗೆ ಉಳಿಯುತ್ತಿದ್ದುದು ಎಂಟು ಅಥವಾ ಒಂಭತ್ತು. ಮೈಸೂರಿನಲ್ಲಿ ಇಬ್ಬರ ಸಂಸಾರವಾಗಬೇಕು.

'ಹೇಗೋ ಒಂದು ವರ್ಷದ ವನವಾಸ ಕಳೆಯಿತು. ಅದನ್ನೆಲ್ಲಾ ವಿವರಿಸಿ ಪ್ರಯೋಜನವಿಲ್ಲ.

'ಮಾರನೆಯ ವರ್ಷ ಹೆಂಡತಿ ಗರ್ಭಿಣಿಯಾದಳು. ತವರುಮನೆಗೆ ಕಳುಹಿಸಿಕೊಡಿರೆಂದು ಅವಳೇನೋ ಕೇಳಿಕೊಂಡಳು. ನಾನು ಕೇಳೆ. ಅವಳ ತಾಯಿತಂದೆಗೂ ನನಗೂ ಮನಸ್ತಾಪ. ನಾನೇಕೆ ಕಷ್ಟಪಡಬೇಕೆಂದು ಅವಳು ಹಾಗೆ ಹೇಳಿದಳು. ಆದರೆ ಹೆತ್ತ ತಂದೆತಾಯಿ ಎನ್ನಿಸಿಕೊಂಡವರು ಒಂದು ಕಾಗದವನ್ನಾದರೂ ನನಗೆ ಬರೆಯಬೇಡವೆ? ಕಳುಹಲೊಲ್ಲೆನೆಂದು ನಾನು ಹಟ ಹಿಡಿದೆ. ನನ್ನ ಪರೀಕ್ಷೆಯ ಸಮಯದಲ್ಲಿ ಅವಳಿಗೆ ಪ್ರಸವಸಂಕಟ— ನನಗೆ ಗಾಬರಿಯಾಯಿತು. ಕೈಲಿ ದುಡ್ಡಿಲ್ಲ, ನೆರವಿಗೆ ಯಾರೂ ಇಲ್ಲ. ಏನು ಮಾಡುವುದಕ್ಕೂ ತೋಚದೆ ಅವಳನ್ನು ಆಸ್ಪತ್ರೆಗೆ ಹಾಕಿದೆ. ಅವಳಿಗೆ ಅದು ಇಷ್ಟವಿಲ್ಲ. ಆದರೆ ಬೇರೆ ಮಾರ್ಗವಿರಲಿಲ್ಲ.

'ಅಂದು ನನ್ನ ಪರೀಕ್ಷೆಯ ಕೊನೆಯ ದಿವಸ. ಸಾಯಂಕಾಲ ಆಸ್ಪತ್ರೆಗೆ ಹೋದೆ. ಹೆರಿಗೆ ಬಹು ಕಷ್ಟವಾಯಿತೆಂದು ತಿಳಿಯಿತು. ಮಗು ಸೌಖ್ಯವಾಗಿತ್ತು—ಬಾಣಂತಿ ಬದುಕುವುದು ಸಂಶಯವಾಗಿತ್ತು. ಅಲ್ಲಿ ಮಲಗಿಕೊಳ್ಳಲೂ ಬಿಡಲಿಲ್ಲ ನನ್ನನ್ನು.

'ಬೆಳಗ್ಗೆ ಹೆಂಡತಿ ತೀರಿಹೋದಳೆಂದು ವರ್ತಮಾನ ಬಂದಿತು. ಮಗು ಉಳಿದುಕೊಂಡಿತ್ತು.

'ಹೇಳದೆ ಕೇಳದೆ ಊರಿಗೆ ಓಡಿಬಂದೆ. ಊರಿಗೆ ಬಂದರೇನು?—ಏನು ಮಾಡುವುದಕ್ಕೂ ತೋರದು. ಎಲ್ಲಿ ನಿಲ್ಲಲೂ ಮನಸ್ಸಿಲ್ಲ. ಹುಚ್ಚನಂತೆ ತಿರುಗುತ್ತಿದ್ದೆ. ಹಾಗೆ ತಿರುಗುತ್ತಿರಲು—'

ಮುದುಕನು ನಡುವೆ ಬಾಯಿಹಾಕಿದನು :

'ಯಾರೋ ನಿನ್ನನ್ನು ಈ ಕೊಳದೆಡೆಗೆ ಕರೆದುಕೊಂಡು ಬಂದರಲ್ಲವೆ?'

ಯುವಕನಿಗೆ ಆಶ್ಚರ್ಯವಾಯಿತು. ಎದ್ದುನಿಂತು—

‘ ನಿನಗೆ ಹೇಗೆ ಗೊತ್ತು ? ’ ಎಂದು ಕೇಳಿದನು.

‘ ಹೇಗೆ ಗೊತ್ತು ಎಂದು ಕೇಳುವೆಯಲ್ಲವೆ. ನನಗೆ ಹೇಗೆ ಗೊತ್ತಿಲ್ಲದೆ ಇರಬಲ್ಲದು ? ಅಂದು ಇಲ್ಲಿಗೆ ನಿನ್ನನ್ನು ಕರೆದುಕೊಂಡು ಬಂದವನು ನಾನೇ ಅಲ್ಲವೆ ? ’

‘ ನನಗೆ ನೆನಪಿಲ್ಲ—ನೀನು ಯಾರು ? ’

‘ ಮತ್ತೆ ನಾನು ಯಾರೆಂದು ಕೇಳುವೆಯಲ್ಲ ?—ಆಶ್ಚರ್ಯ. ಮೊದಲೇ ಹೇಳಿದೆನಲ್ಲ—ನನಗೆ ಜಾತಿಯಿಲ್ಲ, ಕುಲವಿಲ್ಲ. ನನಗೆ ಒಂದು ನೆಲೆಯಿಲ್ಲ ಏಕಕಾಲದಲ್ಲಿ ಎಲ್ಲರಿಗೂ ದಾರಿತೋರುತ್ತಿರುತ್ತೇನೆ. ’

‘ ಓಹೋ ! ಈಗ ಪರಿಚಯವಾಯಿತು. ಅವನೇ ನೀನೋ ! ಹಾಗಾದರೆ ಅಂದೇಕೆ ನನ್ನನ್ನು ತಡೆದೆಯಲ್ಲ ? ’

‘ ನಾನೆಲ್ಲಿ ತಡೆದೆ ?—ನೋಡು, ನೋಡು. ನಿನ್ನ ದುಃಖೋದ್ರೇಕದಲ್ಲಿ ನೀನು ಪ್ರಾಣಬಿಟ್ಟರೆ ನಿನ್ನ ಮಗುವಿನ ಗತಿಯೇನು ಎಂದು ಜ್ಞಾಪಿಸಿಕೊಟ್ಟೆ. ಬದುಕುವುದು ನಿನ್ನ ಕರ್ತವ್ಯವೆಂದು ಹೇಳಿದೆ. ಆದರೆ ಸಾಯುವುದಕ್ಕೆ ಅಡ್ಡಿ ಮಾಡಲಿಲ್ಲವಲ್ಲಾ ? ’

‘ ಹೌದು. ನನ್ನ ತಪ್ಪು, ನಾನು ಸಾಯಬೇಕಾಗಿತ್ತು. ನಾನು ಬದುಕಿ ನನ್ನ ಮಗುವನ್ನು ಕೊಂದೆ. ’

‘ ಕೊಂದೆ ! ಕೊಂದೆಯೊ ? ಅದು ಹೇಗೆ ? ’

‘ ನಾನು ಬದುಕಿದೆ. ಮಗುವಿಗಾಗಿ ಬದುಕಿದೆ. ಹಸುಳೆಯ ಮೇಲಿನ ಪ್ರೇಮವು ಹೆಂಡತಿಯ ವಿಯೋಗವನ್ನು ಮರೆಸಿತು. ನನ್ನ ಮುದ್ದುಮಗುವನ್ನು, ನನ್ನ ಪತ್ನೀಪ್ರೇಮಜ್ಯೋತಿಯ ಕಿಡಿಯನ್ನು ಅಪ್ಪಿಕೊಳ್ಳಬೇಕೆಂದೆನಿಸಿತು. ಮೈಸೂರಿಗೆ ಹೋದೆ. ಆಸ್ಪತ್ರೆಯವರೇ ಸಾಕುತ್ತಿದ್ದ ಮಗುವನ್ನು ಕೇಳಿದೆ. ನನ್ನ ಪರಿಚಯವನ್ನು ಮಾಡಿಕೊಟ್ಟಮೇಲೆ ಕರೆದುಕೊಂಡು ಹೋಗಿ ಮಗುವನ್ನು ತೋರಿಸಿದರು. ಅತ್ಯಾನಂದವಾಯಿತು. ಮಗುವನ್ನು ಕೊಡಿ—ಊರಿಗೆ ಕರೆದುಕೊಂಡು ಹೋಗುತ್ತೇನೆಂದು ಕೇಳಿದೆ.

‘ ಮೂರು ನಾಲ್ಕು ತಿಂಗಳ ಮಗುವನ್ನು ನಿನ್ನ ವಶಕ್ಕೆ ಒಪ್ಪಿಸುವುದಿಲ್ಲ, ವರ್ಷವಾಗಲಿ ’ ಎಂದರು.

‘ ಮೈಸೂರಿನಲ್ಲಿಯೇ ಇರೋಣವೆಂದು ಯೋಚಿಸಿದೆ. ಇರಬೇಕೆಂದು

ಎಷ್ಟೋ ಪ್ರಯತ್ನಪಟ್ಟೆ. ಅಧಿಕಾರಿಗಳಿಗೆ ನನ್ನ ಮೇಲಾಗಲಿ ನನ್ನ ಎಳಹಸು ಳೆಯ ಮೇಲಾಗಲಿ ದಯೆ ಬರಲಿಲ್ಲ. ಎಲ್ಲಿಗೂ ವರ್ಗಮಾಡಿಕೊಡುವುದಿಲ್ಲ ವೆಂದುಬಿಟ್ಟರು. ಅವರದೂ ತಪ್ಪಿಲ್ಲವೆಂದು ಕಾಣುತ್ತದೆ—ನನಗೆ ಪರೀಕ್ಷೆ ಯಲ್ಲಿ ತೇರ್ಗಡೆಯಾಗಿರಲಿಲ್ಲ. ನಾನಿದ್ದ ಸ್ಥಿತಿಯಲ್ಲಿ ಯಾರಿಗೂ ತೇರ್ಗಡೆ ಯಾಗುವಂತಿರಲಿಲ್ಲ.

' ರಜ ಕೇಳಿದೆ ಒಂದು ವರ್ಷ. ಸಂಬಳವಿಲ್ಲದೆ ಬೇಕಾದರೆ ಕೊಡು ತ್ತೇವೆ, ಅರ್ಧಸಂಬಳದ ಮೇಲೆ ಆರು ತಿಂಗಳು ಕೊಡುತ್ತೇವೆಯೆಂದರು.

' ಏಕೋ ಬಲು ಕಷ್ಟಕ್ಕೆ ಒಂದಿತು. ಮೈಸೂರಿನಲ್ಲಿ ನಿಲ್ಲುವುದು ಕಠಿನ ಸಾಯಿತು. ಆಸ್ಪತ್ರೆಯವರನ್ನೇ ಮತ್ತೆ ಬೇಡಿಕೊಂಡೆ. ನನ್ನ ಮೇಲೆ ದಯೆ ಯಿಡಬೇಕೆಂದು ಅವರ ಕಾಲಿಗೆ ಬಿದ್ದೆ. ಏನೋ ಔಷಧ ಕೊಟ್ಟು. ಹೀಗೆ ಹೀಗೆ ಸಾಕಿಕೊಳ್ಳಬೇಕು ಎಂದು ಮಗುವನ್ನು ಬಿಟ್ಟುಕೊಟ್ಟರು.

' ಕತ್ತಲೆ ಕವಿದಿದ್ದ ನನ್ನ ಮನೆಗೆ ಬೆಳಕನ್ನು ತಂದೆ. ನೋವನ್ನೆಲ್ಲಾ ಮರೆತು ಸುಖವಾಗಿಯೇ ಇದ್ದೆ. ಶಾಲೆಗೆ ಹೋದ ವೇಳೆಯಲ್ಲಿ ಮಗುವನ್ನು ನೋಡಿಕೊಳ್ಳುವುದಕ್ಕೆಂದು ಒಬ್ಬ ಒಕ್ಕಲ ಹುಡುಗಿಯನ್ನು ನೇಮಿಸಿ ಕೊಂಡೆ. ಶಾಲೆ ಬಿಟ್ಟೊಡನೆಯೇ ಮೊದಲಿನಂತೆ ಮತ್ತೆಲ್ಲಿಗೂ ತಿರುಗಾಡಲು ಹೊರಡದೆ ಮನೆಗೆ ಬಂದುಬಿಡುತ್ತಿದ್ದೆ. ಆ ಮಗು ನನ್ನನ್ನು ಹಾಗೆ ಸೆಳೆಯು ತ್ತಿತ್ತು. ಅದಕ್ಕೆ ನಾನೇ ಹಾಲು ಕುಡಿಸಿ ನಾನೇ ಮಲಗಿಸುತ್ತಿದ್ದೆ. ತಾಯಿ ಯಿಲ್ಲದ ಆ ತಬ್ಬಲಿಗೆ ನಾನೇ ತಾಯಾಗಿದ್ದೆ.

' ಹೀಗೆಯೇ ಕೆಲವು ದಿವಸಗಳು ಉರುಳುತ್ತಾ ಬಂದುವು.

' ಮೂರು ದಿವಸಗಳ ಹಿಂದೆ ನನ್ನ ಮನೆಯ ಬೆಳಕು ಆರಿತು—ನನ್ನ ಬಾಳ ಬೆಳಕೂ ಆರಿತು. ನಾನು ಶಾಲೆಯಲ್ಲಿ ಕೆಲಸಮಾಡುತ್ತಿದ್ದಾಗ ಮನೆ ಗೆಲಸದ ಹುಡುಗಿ ಓಡಿ ಬಂದು ನನ್ನನ್ನು ಕರೆದಳು. ಏಕೆಂದು ಕೇಳಿದಾಗ ಮೌನವಾಗಿದ್ದಳು. ಮಗುವೊಂದನ್ನೇ ಏಕೆ ಬಿಟ್ಟುಬಂದೆಯೆಂದು ಚೆನ್ನಾಗಿ ಹೊಡೆದೆ-ಪಾಪ, ಚೆನ್ನಾಗಿ ಹೊಡೆದೆ. ಅಳುತ್ತ—' ನಿಮ್ಮ ಮಗು-ಜ್ಞಾನ ವಿಲ್ಲ ' ಎಂದಳು. ಒಂದೇ ಉಸಿರಿನಲ್ಲಿ ಮನೆಗೆ ಓಡಿದೆ. ಮಗುವಿಗೆ ಜ್ಞಾನ ತಪ್ಪಿತ್ತು. ಏನು ಮಾಡಲಿ? ಬೇಗ ಹೋಗಿ ಊರ ಪಂಡಿತರನ್ನು ಕರೆದು ತಂದು ತೋರಿಸಿದೆ. ಏನೋ ಒಂದು ಚೆಕ್ಕೆಯ ಚೂರು ಕೊಟ್ಟು ಹಾಲಿನಲ್ಲಿ

ತೇದು ಕದಡಿ ಕುಡಿಸಿ, ಏನೂ ಭಯವಿಲ್ಲವೆಂದರು. ಎಂಥ ಖಾಯಿಲೆ ಎಂದು ಕೇಳಲು, ವಿಷಮಶೀತಜ್ವರ ಎಂದರು. ಎಂಥಾ ಜ್ವರವೋ ಏನೋ, ಅವರಿಗೂ ಗೊತ್ತಾಯಿತೋ ಇಲ್ಲವೋ, ಚಿಕಿತ್ಸೆಯ ಚೂರಿನಿಂದ ಏನೂ ಪ್ರಯೋಜನ ವಾಗಲಿಲ್ಲ. ಅವತ್ತು ಮಧ್ಯರಾತ್ರಿಯಲ್ಲಿ ಮಗು ತೀರಿಹೋಯಿತು. ಆಸ್ಪತ್ರೆ ಯಿಂದ ಕರೆದುಕೊಂಡು ಬಾರದಿದ್ದರೆ ಆ ಮಗು ಅಲ್ಲಿಯೇ ಬೆಳೆಯುತ್ತಿದ್ದಿ ತೇನೋ! ಆದಕ್ಕೆ ವರ್ಷ ತುಂಬಿದಾಗ ಕರೆದುಕೊಂಡು ಬಂದಿದ್ದರೆ ಚೆನ್ನಾ ಗಿತ್ತು. ಅಯ್ಯೋ. . ಅಯ್ಯೋ. . ಅದನ್ನು ಶಾರದೆ ಎಂದು ಕರೆಯೋಣವೆಂದು ಮನಸ್ಸಿನಲ್ಲಿ ಬಹು ಆಸೆಯಿದ್ದಿತು. ಈಗ ಆ ಶಾರದೆಯೂ ಇಲ್ಲ, ಈ ಶಾರ ದೆಯೂ ಇಲ್ಲ. ನನ್ನ ಮಗು ಬದುಕಿದ್ದರೆ—ದೊಡ್ಡವಳಾಗಿದ್ದರೆ—ಮದುವೆ ಮಾಡುತ್ತಿದ್ದೆ; ಪುಟ್ಟಗಂಡಸಿಗೆ ಕೊಟ್ಟು ಮದುವೆ ಮಾಡುತ್ತಿದ್ದೆ. ಮಗಳ ಮನೆಯಲ್ಲಿ ಮುಪ್ಪನ್ನು ಸುಖವಾಗಿ ಕಳೆಯುತ್ತಿದ್ದೆ. ನನ್ನ ಬಯಕೆಯ ಗುಳ್ಳೆ ಒಡೆದುಹೋಯಿತು. ನನ್ನ ತಪ್ಪು. ಬೆಳೆಯುವ ಮಗುವನ್ನು ಕರೆದುಕೊಂಡು ಬಂದು ಅದನ್ನು ಕೊಂದೆ, ಕೊಂದೆ, ಕೊಂದೆ! ನಾನು ಅಂದೇ ಸತ್ತಿದ್ದರೆ! ಮಗು ಎಲ್ಲಿಯೋ ಹೇಗೋ ಬೆಳೆದುಕೊಂಡು ತಿರಿದುಕೊಂಡಾದರೂ ತಿನ್ನು ತ್ತಿದ್ದಿತು. ಯಾರಾದರೂ ಪುಣ್ಯಾತ್ಮರು ಅದನ್ನು ತಬ್ಬಲಿಯೆಂದು ಸಾಕುತ್ತಿ ದ್ದರು. ಆದರೆ. . . . ನಾವೊಂದು ಬಗೆದರೆ ದೈವವೊಂದು ಬಗೆಯುತ್ತದೆ.'

ಮುದುಕನು ಒಳಗೊಳಗೇ ನಕ್ಕನು.

'ನಾನು ಬದುಕಿದೆ—ಆದರೂ ಮಗು ಸಮೀಪದಲ್ಲಿಲ್ಲದೆ ಬದುಕಲಾರ ದವನಾಗಿದ್ದೆ. ಮಗುವನ್ನು ಕರೆದುಕೊಂಡು ಬಂದು ಕೊಂದೆ. ನಾನು ಬದುಕಿ ಮಗುವನ್ನು ಕೊಂದೆ! ಅಯ್ಯೋ!'

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು. ಮುದುಕನು ಬೇಕೆಂದೇ ಬಾಯಿಬಿಡಲಿಲ್ಲ; ಯುವಕನು ಸ್ವಲ್ಪ ಸಮಾಧಾನಗೊಂಡ ಮೇಲೆ ಮಾತ ನಾಡಿದನು :

'ನೀನು ಕೊಲ್ಲಲಿಲ್ಲ.'

'ಅದು ಹೇಗೆ?'

'ಅದೇ ಸತ್ತಿತು.'

'ಅದೇ ಸತ್ತಿತು—ಸರಿ. ಆದರೆ ಇದುವರೆಗೂ ಹೇಳಿದ್ದು ನಿನಗೂ ಅರ್ಥವಾಗಲಿಲ್ಲವೆ?'

'ನಿನ್ನ ಮಗುವನ್ನು ಕೊಲ್ಲಬೇಕೆಂದು ನೀನು ಬದುಕಿದೆಯೇನು? ಕೊಲ್ಲಬೇಕೆಂದು ಅದನ್ನು ಕರೆತಂದೆಯೇನು?'

'ಇಲ್ಲ—ಆದರೂ ನಾನು ಕರೆತಾರದಿದ್ದರೆ ಬದುಕಿರುತ್ತಿತ್ತೇನೋ?'

'ಕರೆತರದಿದ್ದರೆ—ಆಸ್ಪತ್ರೆಯಲ್ಲಿಯೇ ಇದ್ದಿದ್ದರೆ—'ರೆ' ಮಾತು ಬೇಕಿಲ್ಲ. ನೀನು ಹುಟ್ಟದಿದ್ದರೆ?'

'ನಿನ್ನ ತರ್ಕ-ವಿತರ್ಕ ನನ್ನ ತಲೆಗೆ ಹಿಡಿಯುವುದಿಲ್ಲ; ಅದರಿಂದ ನನಗೆ ಪ್ರಯೋಜನವಿಲ್ಲ. ನನ್ನ ಹೆಂಡತಿಯ ಚಿತ್ರ, ನನ್ನ ಮಗುವಿನ ಚಿತ್ರ ಇವುಗಳನ್ನು ಬಿಟ್ಟು ನನಗೆ ಏನೂ ಕಾಣುವುದಿಲ್ಲ. ನನಗೆ ಕೇಳುತ್ತಿರುವುದು 'ಬಾ, ಬಾ, ಬೇಗ ಬಾ' ಎಂದು ಕರೆಯುತ್ತಿರುವ ಅವರಿಬ್ಬರ ಕೂಗು. ನಾನು ಇನ್ನು ಒಂದು ಘಳಿಗೆಯೂ ಬದುಕಿರಲಾರೆ. ಒಂದಲ್ಲ, ಎರಡು ಆಘಾತಗಳು. ಅಯ್ಯೋ, ಆ ನೋವು ಹೃದಯವನ್ನು ದಹಿಸುತ್ತಿದೆ, ಅದನ್ನು ಸಹಿಸಲಾರೆ. ದಾರಿತೋರುತ್ತೇನೆ, ದಾರಿತೋರುತ್ತೇನೆ ಎಂದು ಜಂಭಕೊಚ್ಚಿಕೊಳ್ಳುವೆಯಲ್ಲ, ದಾರಿತೋರು—ಈ ನೋವನ್ನು ಈ ಕ್ಷಣದಲ್ಲಿ ಕೊನೆಗಾಣಿಸುವ ಮದ್ದಿದೆಯೇ ನಿನ್ನಲ್ಲಿ? ಇದ್ದರೆ ಕೊಡು, ಕೊಡು, ನನ್ನನ್ನು ಬದುಕಿಸು.'

'ಬದುಕು—ಸಾವು—ಔಷಧ—ಒಂದೂ ನನ್ನಲ್ಲಿಲ್ಲ. ಇರುವ ಎಡೆಯನ್ನು ತೋರಿಸಿಕೊಡುತ್ತೇನೆ. ಕೊಡುವ ಶಕ್ತಿ ನನಗಿಲ್ಲ, ಶಕ್ತಿಯಿದ್ದರೂ ಅದು ನನ್ನ ಕಾರ್ಯವಲ್ಲ. ಅದನ್ನು ತೆಗೆದುಕೊಂಡು ಉಪಯೋಗಿಸಿಕೊಳ್ಳುವುದು ಬಿಡುವುದು ನಿನ್ನ ಕೆಲಸ, ನಿನ್ನ ಶಕ್ತಿ. ಸ್ವಲ್ಪ ತಾಳು..' ಎಂದು ಮುದುಕನು ಆಲೋಚಿಸುವವನಂತೆ ತಲೆಬಾಗಿ ಕುಳಿತುಕೊಂಡನು.

ಯುವಕನು ಸುಮ್ಮನಿರದೆ—'ತಾಳಲಾರೆ, ಬೇಗ ಕೊಡು, ಕೊಡು' ಎಂದು ಚೀರಿದನು.

'ಹಾಗಾದರೆ ನೋಡಿಲ್ಲಿ: ಇಲ್ಲಿ ಎರಡು ಹಣ್ಣುಗಳಿವೆ. ಒಂದು ಮೇಲುನೋಟಕ್ಕೆ ನುಣ್ಣಗೆ ಬಣ್ಣಗೆ ಮನೋಹರವಾಗಿದೆ—ಪರಮೌಷಧಿ. ಇದೋ ಇನ್ನೊಂದನ್ನು ನೋಡು—ನೋಡುವುದಕ್ಕೆ ಚೆನ್ನಾಗಿಲ್ಲ. ಬರಿಯ ಮುಳ್ಳು ಮುಳ್ಳು. ತಿನ್ನುವುದು ಬಲುಕಷ್ಟ. ಇವುಗಳ ಹೊರರೂಪಿನಂತೆಯೇ

ಒಳತಿರುಳು, ಸತ್ವ. ಒಂದು ಬಹಳ ಸಿಹಿ; ತೀಕ್ಷ್ಣವಾದ ಗುಣವುಳ್ಳದ್ದು. ನೋವಿನಲ್ಲಿ ತಮ್ಮನ್ನು ತಾವು ಮರೆತಿರುವವರು ಆ ಹಣ್ಣನ್ನು ಬಯಸುತ್ತಾರೆ. ಹೆಚ್ಚು ಜನರು ಆ ಹಣ್ಣಿಗೆ ಆಸೆಪಡುತ್ತಾರೆ. ಇನ್ನೊಂದು ಕಹಿ; ನೋವಿಂದ ನರಳುತ್ತಿರುವವರಿಗೆ ಇದೂ ದಿವ್ಯೌಷಧವೇ, ಹಾಗೆಂದು ಎಷ್ಟೋ ಜನರು ಅರಿಯರು. ಕೊನೆಯಲ್ಲಿ ಅತ್ಯಂತ ಫಲಕಾರಿಯಾದರೂ ಈ ಔಷಧ ಹಿಡಿಯುವುದು ಸ್ವಲ್ಪ ತಡ. ಕೆಚ್ಚೆದೆಯುಳ್ಳ ಒಬ್ಬಿಬ್ಬರು ಈ ಹಣ್ಣನ್ನು ಸ್ವೀಕರಿಸುತ್ತಾರೆ. ನೀನು ಯಾವುದನ್ನು ಬೇಕಾದರೂ ಆರಿಸಿಕೊಳ್ಳಬಹುದು. ಇದನ್ನೇ ಆರಿಸಿಕೊಳ್ಳಬೇಕು ಅದನ್ನೇ ಆರಿಸಿಕೊಳ್ಳಬೇಕು ಎಂದು ನನ್ನ ಬಲವಂತವೇನೂ ಇಲ್ಲ. ಅಥವಾ ನಿನ್ನ ಆಯ್ಕೆಯಲ್ಲಿ ನಾನು ಸಹಾಯವನ್ನೂ ಮಾಡಲಾರೆ. ಎರಡರ ಗುಣಾವಗುಣಗಳನ್ನೂ ತಿಳಿಸಿದ್ದೇನೆ. ನಿನಗೆ ಬೇಕಾದುದನ್ನು ತೆಗೆದುಕೋ. ನಾನು ಹೊರಡುತ್ತೇನೆ.'

'ನೀನು ಸಾಮಾನ್ಯ ಮುದುಕನಲ್ಲ. ನರಳುವ ನನ್ನೊಡನೆ ಹಾಸ್ಯವೆ? ನಿನ್ನ ಮಾತಿನ ಹಣ್ಣುಗಳಲ್ಲಿಯೇ ನನ್ನನ್ನು ತೃಪ್ತಿಗೊಳಿಸುವಂತೆ ಕಾಣುತ್ತದೆ. ಹಣ್ಣುಗಳೆಲ್ಲಿ, ತೋರು?' ಎಂದು ತವಕದಿಂದ ಮುದುಕನ ಭುಜಗಳನ್ನು ಹಿಡಿದು ಅಲ್ಲಾಡಿಸಿದನು.

ಮುದುಕನು ಗಹಗಹಿಸಿ ನಕ್ಕನು. 'ಯುವಕನೇ, ಆ ಹಣ್ಣುಗಳನ್ನು ತೋರಿಸಲು ಅವು ಮರದಲ್ಲಿ ಬಿಡುವ ಹಣ್ಣುಗಳೆಂದು ತಿಳಿದೆಯೇನು? ಅವು ನಮ್ಮ ಈ ಕೈಗಳಿಗೆ ಸಿಕ್ಕುವ ಹಣ್ಣುಗಳಲ್ಲ. ಕಲ್ಪನಾಫಲಗಳು. ನಿನ್ನ ಬಯಕೆಯನ್ನು, ನಿನ್ನ ಕಲ್ಪನೆಯನ್ನು, ನಿನ್ನ ಮನೋನಿಶ್ಚಯವನ್ನು ಅನುಸರಿಸಿ ಆ ಹಣ್ಣು ತಾನಾಗಿ ರೂಪುಗೊಂಡು ನಿನ್ನ ಕೈಸೇರುವುದು. ಅದನ್ನು ನೀನು ಭುಜಿಸಬಹುದು.'

'ಹಾಗಾದರೆ—ನನ್ನ ಬಯಕೆ ಫಲರೂಪವಾಗಿ ನನ್ನ ಕೈಗೆ ಬರುವುದೆ?'

'ಹೌದು.'

'ನನಗೆಲ್ಲಿಯ ಬಯಕೆ! ಹೆಂಡತಿಯನ್ನೂ ಮಗುವನ್ನೂ ಕಳೆದುಕೊಂಡ ನನಗೆಲ್ಲಿಯ ಬಯಕೆ! ಆದರೂ ಒಂದು ಬಯಕೆಯಿದೆ. ಮುಂದಿನ ಜನ್ಮದಲ್ಲಿಯಾದರೂ ನಾನವರನ್ನು ಸೇರಬೇಕೆಂಬುದೇ ನನ್ನ ಬಯಕೆ.'

'ಮುಂದಿನ ಜನ್ಮದಲ್ಲಿ ಅವರಿಬ್ಬರನ್ನೂ ನೀನು ಸೇರಬೇಕೆನ್ನುವುದು ನಿನ್ನ ಬಯಕೆಯೋ? ಹಾಗಾದರೆ ಸುಮ್ಮನೆ ಮನೆಗೆ ಹೋಗು.'

'ಮನೆಗೆ ಹೋಗು! ಮನೆಗೆ ಹೋಗಿ ಮಾಡುವುದೇನು? ಆ ಹಾಳು ಮನೆಯಲ್ಲಿ, ಆ ಬೆಳಕಿಲ್ಲದ ಮನೆಯಲ್ಲಿ ಮಾಡಬೇಕಾಗಿರುವುದಾದರೂ ಏನು?'

'ಏನೂ ಇಲ್ಲ. ಬದುಕಿನ ಹಾದಿಯನ್ನು ಹಿಡಿ.'

'ಬದುಕು!....ಬದುಕು!....ಹಾಳು ಬದುಕು! ಬದುಕಬೇಕೆ ನಾನು?—ಈಗ ತಗುಲಿರುವ ಈ ಎರಡು ಪೆಟ್ಟುಗಳೇ ಸಾಕು, ಬದುಕಿಗೆ—ನನ್ನ ಬಡತನದ ಬದುಕಿಗೆ ತಲೆಯೊಡ್ಡಿ ಇನ್ನೂ ಪೆಟ್ಟುಗಳನ್ನು ತಿನ್ನು ಎಂದು ಹೇಳುವೆಯಾ? ಈಗ ರಕ್ತ ಸುರಿಯುತ್ತಿರುವುದು ಸಾಲದೆ? ಈಗ ಅನುಭವಿಸುತ್ತಿರುವ ವೇದನೆ ಸಾಲದೆ?'

'ಮಗೂ ವಿವರಿಸಿ ಹೇಳುತ್ತೇನೆ, ಕೇಳು. ನೀನು ಬದುಕು, ಹೋಗು. ಕಾಲವೆಂಬ ಮಹೌಷಧವು ಎಲ್ಲವನ್ನೂ, ಎಲ್ಲಾ ವೇದನೆಗಳನ್ನೂ ಗುಣ ಮಾಡುವುದು. ಈ ಗಾಯಗಳ ಗುರುತು ನಿಲ್ಲುವುದಾದರೂ ಅವು ಸಂಪೂರ್ಣ ವಾಗಿ ಮಾಯುವುವು; ಸ್ವಲ್ಪವೂ ನೋವು ಉಳಿಯುವುದಿಲ್ಲವೆಂದು ಭರವಸೆ ಕೊಡುತ್ತೇನೆ. ಒಮ್ಮೊಮ್ಮೆ ಆ ಗಾಯದ ಗುರುತು ಕಣ್ಣಿಗೆ ಬಿದ್ದಾಗ ಮಾತ್ರ ಗಾಯದ ಪೂರ್ವಸ್ವರೂಪವು ನೆನಪಾಗಿ ಸ್ವಲ್ಪ ನೋವಾಗಬಹುದು. ಬಡತನದ ಬಾಳಿಗಲ್ಲವೆ ನೀನು ಅಂಜುವುದು? ತೀರ ಮುಳುಗಿದವನಿಗೆ ಚಳಿಯೇನು ಗಾಳಿಯೇನು? ಬಡತನ ನಿನಗೆ ಹೊಸದೆ? ಇನ್ನು ಎಷ್ಟು ಕಷ್ಟಗಳು ಒದಗಿದರೆ ತಾನೆ ಏನು? ಈಗ ನಿನಗೆ ಬಿದ್ದಿರುವ ಪೆಟ್ಟುಗಳಿಗಿಂತ ಬಲವತ್ತರ ವಾದ ಪೆಟ್ಟುಗಳು ಬೀಳಲಾರವು. ನಿನ್ನ ಮುಂದಿನ ಬದುಕು ಕಷ್ಟಕರವಲ್ಲ ವೆಂದು ನಾನು ಹೇಳುವುದಿಲ್ಲ. ಎಷ್ಟೇ ಕಷ್ಟಗಳು ಬಂದರೂ ಅವುಗಳನ್ನು ಎದುರಿಸಿ ಜಯಿಸಿ ಮುಂದೆ ನುಗ್ಗಿದರೆ ಅಂದು ನೀನು ಹುಟ್ಟಿದುದಕ್ಕೆ ಸಾರ್ಥಕ. ಕಷ್ಟಗಳೊದಗುವುದು ನಿನ್ನ ಸಾಮರ್ಥ್ಯಪರೀಕ್ಷೆಗಾಗಿ. ಬಾಳು ಒಂದು ಪರೀಕ್ಷೆ—ಒಂದು ಮಹಾಪರೀಕ್ಷೆ. ಆ ಪರೀಕ್ಷೆಗೆ ಹೆದರುವುದೇಕೆ?—ಅದನ್ನು ಎದುರಿಸು—ಎದುರಿಸಿದರೆ ಸಾಕು, ಅದನ್ನು ಮುಗಿಸಿದಂತೆ. ಅಂದು ಸರ್ವಾಧಿಕಾರಿಯು ನಿನ್ನನ್ನು ಸ್ವರ್ಗಕ್ಕೆ ವರ್ಗಮಾಡುವನು. ವೀರನಂತೆ ಅಲ್ಲಿಗೆ ಹೋಗು. ನಿನ್ನ ಹೆಂಡತಿಯೂ ಮಗುವೂ ನಿನಗಾಗಿ ಅಲ್ಲಿ ಕಾದಿದ್ದು,

ಗೊಣಗದೆ ಕಾದಿದ್ದು ನಿನ್ನನ್ನು ಎದುರುಗೊಳ್ಳುವರು. ನೀನು ಬದುಕಿಗೆ ಬೆನ್ನುಕೊಟ್ಟು ನಿನ್ನವರನ್ನು ಸೇರಲು ತವಕಪಟ್ಟರೆ ಅವರು ನಿನ್ನನ್ನು ಹೇಡಿ ಯೆಂದು ನಿರಾಕರಿಸಬಹುದು. ಆದ್ದರಿಂದ, ಸ್ವರ್ಗದಲ್ಲಿ ಹೆಂಡತಿಯನ್ನೂ ಮಗುವನ್ನೂ ಕೂಡುವೆನೆಂಬ ಭರವಸೆಯ ಬೆಳಕಿನಲ್ಲಿ ಬದುಕು, ಹೋಗು.'

ಮುದುಕನ ಮಾತನ್ನು ಸಾವಧಾನವಾಗಿ ಕೇಳುತ್ತಿದ್ದ ಯುವಕನು ನಿರಾಶನಾಗಿ ನುಡಿದನು. 'ಏನೋ ಮಹೋಪಕಾರ ಮಾಡುವೆಯೆಂದು ನಂಬಿದರೆ ಏನೋ ಉಪನ್ಯಾಸ ಮಾಡಿದೆಯಲ್ಲ. ಬದುಕು ಎಂದು ಹೇಳು ವೆಯಾ? ನರಕದ ಮಹಾದ್ವಾರವನ್ನೇ ತೆರೆದು ತೋರಿಸಿದೆ. ನಾನು ಇದು ವರೆಗೆ ಅನುಭವಿಸಿರುವುದೇ ಸಾಕು—ಅದು ಕೊನೆಗಾಣಬೇಕು; ಇನ್ನು ತುಸು ಯಾತನೆಯನ್ನೂ ನಾನು ತಡೆಯಲಾರೆ. ಆ ಬದುಕು ನನಗೆ ಬೇಡ.'

ಮುದುಕನು ಎತ್ತಿದ ಕಂಠದಲ್ಲಿ, ಗಂಭೀರವಾಗಿ ಉತ್ತರ ಕೊಟ್ಟನು.

'ಹಾಗಾದರೆ ಈಗಲೇ ಸಾಯಿ. ಉಳಿದಿರುವುದೊಂದೇ ಮಾರ್ಗ. ಇದೋ, ಈ ಕೊಳವನ್ನು ನೋಡು. ಎಷ್ಟೋ ಜನರು ಇದನ್ನು ಪ್ರವೇಶ ಮಾಡಿದ್ದಾರೆ. ಆ ಕುರಿಗಳನ್ನು ನೀನೂ ಹಿಂಬಾಲಿಸು. ಸಾವಿನಲ್ಲಿ ನಿನ್ನ ನೋವನ್ನು ಮರೆ. ಆದರೆ ಇದು ನೀನು ತಂದುಕೊಂಡ ಸಾವು—ಈ ಸಾವಿ ನಲ್ಲಿ ನಿನ್ನ ನೋವು ನಂದಿದರೂ ಅದು ಸ್ವರ್ಗದ್ವಾರವಾಗಲಾರದು.'

'ನನಗೆ ಬದುಕಿನ ನರಕವೂ ಬೇಡ—ಆದರ ಮುಂದಿನ ಸ್ವರ್ಗವೂ ಬೇಡ. ನನ್ನ ನೋವು ಹೋಗಬೇಕು.'

'ಇನ್ನೊಮ್ಮೆ ಪರ್ಯಾಲೋಚಿಸು. ನೋವು ಸಂಪೂರ್ಣ ನಾಶವಾಗು ವದು—ಆದರೊಡನೆ ನೀನು ಅಳಿಯುವೆ; ಅದು ಕಡಮೆಯಾಗುತ್ತದೆ, ನಾಶ ವಾದರೂ ಆಗಬಹುದು, ನೀನು ಉಳಿಯುವೆ. ಏನು ಹೇಳು.'

'ಇದೋ ಧೃಢನಿಶ್ಚಯ ಮಾಡಿದೆ' ಎಂದು ಯುವಕನು ಇನ್ನೇನು ಧುಮುಕಬೇಕು—ಮುದುಕನು ಎದ್ದುಬಂದು ಕೈಹಿಡಿದುಕೊಂಡನು.

ಯುವಕನು ಕೈ ಒದರಿ—'ಏನು! ಮತ್ತೆ ತಡೆಯುವೆಯಾ? ಹಹ್ಹಹ! ಸೊಗಸಾದ ದಾರಿತೋರಿ ಅಲ್ಲಿ ಹೋಗಬೇಡವೆಂದು ಹೆದರಿಸುತ್ತೀಯ?'

'ನಾನು ತಡೆಯುವುದೂ ಇಲ್ಲ, ಹೆದರಿಸುವುದೂ ಇಲ್ಲ. ಮೂರನೆಯ ಸಲ ಹೇಳುತ್ತೇನೆ. ಪರ್ಯಾಲೋಚಿಸು.'

'ಇಲ್ಲ, ಮನಸ್ಸುಮಾಡಿಬಿಟ್ಟಿದ್ದೇನೆ; ಇದೋ, ಸಾವನ್ನು ಅಪ್ಪುತ್ತೇನೆ' ಎಂದು ಮೊದಲಿನಂತೆ ಧುಮುಕಲನುವಾಗಿ ನಿಂತು ಕೊಳವನ್ನು ದಿಟ್ಟಿಸಿ ನೋಡಿದನು—'ಆ' ಎಂದು ಬಾಯಿ ತೆರೆಯಿತು. ಒಳಗೆ ಕಾರ್ಗತ್ತಲೆ! ಅದೇನು ಭೀಕರವಾಗಿದೆ! ಹಸಿವು, ಹಸಿವು, ಬಾ! ಬಾ! ಎಂದು ಕೂಗುವಂತಿದೆ!

ಯುವಕನ ಕೈಕಾಲು ನಡುಗಿತು, ಒಲವುಡುಗಿತು. ಕಣ್ಣು ಮುಚ್ಚಿಕೊಂಡನು. ಬೀಳಬೇಕು, ಬೀಳಲಾರ. ಹಾಗೆಯೇ ನಿಂತಿದ್ದಾನೆ.

ಹಿಂದೆ ನಿಂತಿದ್ದ ಮುದುಕನು ಮತ್ತಿಷ್ಟು ಮುಂದೆ ಬಂದು ಕೇಳಿದನು. 'ಏತಕ್ಕೆ ಸುಮ್ಮನೆ ನಿಂತಿರುವೆಯಲ್ಲ? ಸಾಯಲು ಅಂಜಿಕೆಯೇ? ನೀನು ನಿಶ್ಚಯವಾಗಿಯೂ ಸಾವನ್ನು ಅಪ್ಪುವುದಾದರೆ ಇನ್ನೂ ಕೊಂಚ ಸಹಾಯ ಮಾಡಬಲ್ಲೆ—ಬೇಕಾದರೆ ಹಿಂದಿನಿಂದ ತಳ್ಳುತ್ತೇನೆ.'

ಯುವಕನು ಕೊಳವನ್ನು ನೋಡುತ್ತಲೇ ಉತ್ತರ ಕೊಟ್ಟನು. 'ಅಂಜಿಕೆಯಲ್ಲ! ಅಂಜಿಕೆಯಲ್ಲ! ನನ್ನ ಹೆಂಡತಿ ಮಗು ಎಲ್ಲಿಯೋ ಇದ್ದಾರೆ—ನಾನು ಈ ಅಂಧಕಾರ ಕೂಪದಲ್ಲಿ, ಈ ಪಾತಾಳದಲ್ಲಿ ಬಿದ್ದು ಅವರನ್ನು ಕಾಣಲಾಗುವುದೇ ಎಂದು ಶಂಕಿಸುತ್ತಿದ್ದೇನೆ, ಅಷ್ಟೆ!'

'ಆಗುವುದಿಲ್ಲವೆಂದೇ ಹೇಳಬೇಕು. ಈ ವಿಳಂಬದಿಂದ ಪ್ರಯೋಜನವಿಲ್ಲ. ಈಗಲೂ ಮಿತಿಮೀರಿಲ್ಲ. ಅವರನ್ನು ಕಾಣುವ ಭರವಸೆಯ ಬೆಳಕಿನಲ್ಲಿ ಬದುಕು, ಹೋಗು. ನೀನು ಮನಸ್ಸುಮಾಡಿದರೆ ಸಾಕು, ಮಾರ್ಗವು ಸುಗಮವಾಗುವುದು.'

'ಇದೋ ಹೊರಟೆ' ಎಂದು ಕಲ್ಲೆದೆ ಮಾಡಿಕೊಂಡು ಯುವಕನು ಮನೆಯ ಹಾದಿ ಹಿಡಿದನು.

ಮುದುಕನು ಹಿಂದಿನಿಂದ ಉದ್ಘೋಷಿಸಿದನು. 'ಭಲೇ! ಯುವಕನೇ! ಭಲೇ! ನೀನೀಗ ಸರ್ವಶಕ್ತ! ಇನ್ನೊಮ್ಮೆ ಬಂದು ಕಾಣುವೆನು' ಎಂದು ಕಣ್ಮರೆಯಾದನು.

* * * *

ರಾಮಕೃಷ್ಣನು ಈಗ ಯುವಕನಲ್ಲ, ಮುದುಕನಾಗಿದ್ದನು. ಕಾಲವು ಅವನ ವೇದನೆಯನ್ನು ಬಹುವಾಗಿ ಪರಿಹರಿಸಿತು; ಅವನ ರೂಪನ್ನೂ ಬಹಳ

ಬದಲಾಯಿಸಿತು. 'ಪಕ್ವವಾದ ಅನುಭವಕ್ಕೆ ಮುಪ್ಪೇ ತಕ್ಕ ರೂಪು' ಎಂಬ ವಾಕ್ಯವು ಅವನ ನೆನಪಿಗೆ ಬಂದಿತು. ರಾಮಕೃಷ್ಣನು ತನ್ನ ಅನುಭವಸಾರ ವನ್ನು ತನ್ನಲ್ಲಿಯೇ ಬಚ್ಚಿಟ್ಟುಕೊಳ್ಳದೆ ಇತರರಿಗೂ ಹಂಚುತ್ತಿದ್ದನು; ಅವನ ಒಂದೊಂದು ನುಡಿಯೂ ಒಂದೊಂದು ಅಮೃತಬಿಂದುವಿನಂತಿದ್ದು ಅದನ್ನು ಸವಿದವರೆಲ್ಲಾ ಪುಷ್ಟರಾಗುತ್ತಿದ್ದರು. ಊರಿನವರಿಗೆಲ್ಲಾ ರಾಮಕೃಷ್ಣನನ್ನು ಕಂಡರೆ ಬಹಳ ಗೌರವ, ಅತಿಶಯ ಭಕ್ತಿ. ಎಲ್ಲರೂ ಬೇಕುಬೇಕಾದುದನ್ನು ಇವನಿಗೆ ತಂದುಕೊಡಲು ಸಿದ್ಧರಾಗಿದ್ದರು. ಒಬ್ಬ ಮಹನೀಯನು— 'ರಾಮಣ್ಣನವರೇ, ನಿಮಗೆ ಮುಪ್ಪಿನ ಕಾಲ; ಕಡೆಗಾಲದಲ್ಲಿ ನಿಮ್ಮನ್ನು ನೋಡಿಕೊಳ್ಳುವವರಾರು? ನಮ್ಮ ಮನೆಯಲ್ಲೇ ಬಂದು ಇದ್ದುಬಿಡಿ' ಎಂದು ಕೇಳಿಕೊಳ್ಳಲು ಕಡೆಗಾಲದ ಯೋಚನೆ ನಿಮಗೇಕೆ? ಅದರ ವಿಷಯವಾಗಿ ನನಗೇ ಸ್ವಲ್ಪವೂ ಚಿಂತೆಯಿಲ್ಲ. ನೀವು ಅಷ್ಟು ಹೇಳಿದರಲ್ಲ, ಅದೇ ಸಾಕು; ಪರಮಸಂತೋಷ' ಎಂದು ಉತ್ತರ ಕೊಟ್ಟನು.

ಅವನು ಯಾರೊಡನೆಯೂ ಹೆಚ್ಚು ಕಲೆಯುತ್ತಿರಲಿಲ್ಲ; ತಾವಾಗಿಯೇ ಬಂದವರನ್ನು ಆದರದಿಂದ ಬರಮಾಡಿಕೊಂಡು, ಅವರೊಡನೆ ಮಾತುಕಥೆ ಯಾಡಿ, ಅವರು ಏನಾದರೂ ಪ್ರಶ್ನೆಹಾಕಿದರೆ ಅದಕ್ಕೆ ಸಮಂಜಸವಾದ ಉತ್ತರ ಹೇಳಿ, ಅವರನ್ನು ಉಪಚಾರಮಾಡಿ ಕಳುಹಿಸುತ್ತಿದ್ದನು. ಅಂತೂ ಊರಿನವರೆಲ್ಲಾ ಒಂದಲ್ಲಾ ಒಂದು ದಿನ ಕುಗ್ಗಿದ ಮನವುಳ್ಳವರಾಗಿ ಬಂದು ಇವನ ಸಂದರ್ಶನಮಾತ್ರದಿಂದ ಹಿಗ್ಗುತ್ತಾ ಹಿಂದಿರುಗುತ್ತಿದ್ದರು. ರಾಮ ಕೃಷ್ಣನ ಖ್ಯಾತಿ ಸುತ್ತಮುತ್ತ ಇರುವ ಹಳ್ಳಿಪಳ್ಳಿಗೆಲ್ಲಾ ಹರಡಿ ಇವನ ದರ್ಶನಲಾಭಕ್ಕಾಗಿ ಅನೇಕರು ದೂರದಿಂದ ನಡೆದುಬರುತ್ತಿದ್ದರು. ಇವನೊಬ್ಬ ಅಸಾಧಾರಣ ವ್ಯಕ್ತಿಯೆಂದು ಎಲ್ಲರ ಭಾವನೆ. ಇಷ್ಟಾದರೂ ರಾಮಕೃಷ್ಣನ ಅನುಭವದ ಆಳವನ್ನು ಯಾರೂ ಕಂಡರಿಯರು.

ಹೀಗೆ, ಬತ್ತಿಹೋಗಬೇಕಾಗಿದ್ದ ರಾಮಕೃಷ್ಣನ ಜೀವನವಾಹಿನಿ ವಿಸ್ತಾರವಾಗಿ, ಗಭೀರವಾಗಿ, ಮಂದವಾಗಿ ಸಾಗುತ್ತಿದ್ದಿತು; ತನ್ನ ಗುರಿ ಯನ್ನು ಕುರಿತು ಸಾಗುತ್ತಿದ್ದಿತು.

ಒಂದು ದಿವಸ ನಡುರಾತ್ರಿಯಲ್ಲಿ ಯಾರೋ ಬಾಗಿಲು ತಟ್ಟಿದಂತಾ ಯಿತು. ರಾಮಕೃಷ್ಣ ಹಾಸಿಗೆಯಲ್ಲಿ ಮಲಗಿದ್ದವನು ಹಾಗೆಯೇ ಕಣ್ಣು

ಬಿಟ್ಟು ನೋಡಿದನು—ಆವನಿಗೆ ಕೂಡಲೆ ಎಚ್ಚರವಾಯಿತು. ಬಾಗಿಲು ತಾನಾಗಿಯೇ ತೆರೆಯಿತು. ಯಾರೋ ನಿಧಾನವಾಗಿ ನಡೆದುಬಂದು ಹಾಸಿಗೆಯ ಬಳಿ ನಿಂತರು—ಇಳಿಯುತ್ತಿದ್ದ ಹಣತೆಯ ಬೆಳಕಿನಲ್ಲಿ ಬಂದಾತ ಹಳೆಯ ಮುದುಕನೆಂದು ಗೊತ್ತಾಯಿತು.

ಆದರೂ, ರಾಮಕೃಷ್ಣನು—'ನೀವಾರು?' ಎಂದು ಕೇಳಿದನು.

'ಆಗಲೇ ಮರೆತೆಯಾ! ನಾನು ನಿನಗೆ ಚಿರಪರಿಚಿತನಲ್ಲವೆ?'

'ಆಹಾ, ನಿನಗಾಗಿ ನಾನು ಇಷ್ಟು ದಿನವೂ ಕಾದಿದ್ದೆ!'

'ಒಳ್ಳೆಯದಾಯಿತು. ನೀನು ಕಾಯುವುದು ಹಾಗಿರಲಿ, ನಿನ್ನ ಹೆಂಡತಿ ಮಗು ನಿನಗಾಗಿ ಕಾದಿದ್ದಾರೆ; ಬೇಗ ಬಾ, ನಿನ್ನನ್ನಲ್ಲಿಗೆ ಕರೆದೊಯ್ಯುವೆನು.'

'ಇದೋ ಬಂದೆ, ಬಂದೆ' ಎಂದು ರಾಮಕೃಷ್ಣನು ಕೈಯೂರಿಕೊಂಡು ಅರ್ಧ ಎದ್ದು, ಮತ್ತೆ ಹಾಗೆಯೇ ಹಾಸಿಗೆಯ ಮೇಲೆ ಉರುಳಿಕೊಂಡನು.

ತೈಲವು ಮುಗಿದಿತ್ತು—ಹಣತೆಯ ದೀಪವಾರಿತು.

---

# ಕತ್ತೆಗಾರ ಚಂದು   

ಚಂದು ತನ್ನ ಕೆಳತುಟಿಯನ್ನು ಒಂದು ಸೀಸದಕಡ್ಡಿಯಿಂದ ಸುಮ್ಮನೆ ತಿವಿದುಕೊಳ್ಳುತ್ತ ಕುಳಿತಿದ್ದ. ಮೇಜಿನ ಮೇಲೆ ಅವನ ಮುಂದೆ ಒಂದೆರಡು ಗಜ ಕಾಗದಗಳಿದ್ದುವು. ಲ್ಯಾಂಪಿನ ಒತ್ತಿ ಬಹಳ ದೊಡ್ಡದಾಗಿ ಉರಿಯು ತ್ತಿತ್ತು. ನಾನು ಸದ್ದುಮಾಡದೆ ಅವನ ಹಿಂದೆ ಹೋಗಿ ನಿಂತುಕೊಂಡೆ. ಐದು ನಿಮಿಷವಾಯ್ತು; ಹತ್ತು ನಿಮಿಷವಾಯ್ತು. ಮಹಾರಾಯ ತುಟಿ ಯನ್ನು ಬಿಟ್ಟು ಕೆನ್ನೆಯನ್ನು ತಿಪಿದುಕೊಳ್ಳುವುದಕ್ಕಾರಂಭಿಸಿದ. ನನಗೂ ಬೇಜಾರಾಯಿತು. ಇವನ ಹಿಂದೆ ಜವಾನನಂತೆ ಎಷ್ಟು ಹೊತ್ತು ನಿಲ್ಲು ವುದು ? ಬೆನ್ನಿನ ಮೇಲೆ ಗುದ್ದುವುದಕ್ಕೆಂದು ಕೈಯೆತ್ತಿದೆ. ಕೈಬಾರದೇ ಹೋಯಿತು. ಪಾಪ, ಎಂದೆನಿಸಿತು. ಎಷ್ಟೇ ಆಗಲಿ ನನ್ನ ಶ್ರೇಷ್ಠಗೆಳೆಯ; ಅದರಲ್ಲೂ ನಮ್ಮ ಜನ. ಆದರೂ ಇವನಿಗೆ ಗಸ್ತುಕೊಡಬೇಕೆಂದೆನಿಸಿತು. ಬಲವಾಗಿ ಕಣ್ಣು ಮುಚ್ಚಿದೆ. 'ಯಾರೋ....ಥೂ....ನನ್ನ ಕಣ್ಣು ಹೋಯ್ತು' ಎಂದು ಕೂಗಿದ. ಕೊನೆಗೆ ಕನಿಕರದಿಂದ ನನ್ನ ಕೈಗಳನ್ನು ತೆಗೆದೆ. ಅವನು ಹಿಂದಿರುಗಿ ನೋಡಿ—'ನೀನೇ ! ಕೂತುಕೊ, ಕಿಟ್ಟು; ಏನು, ಬಂದೆಯಲ್ಲ' ಎಂದು, ಒಂದು ಸ್ಟೂಲನ್ನು ತಂದು ಹಾಕಿದ.

'ಏನಪ್ಪ ,ಮದುವೆಯಿಲ್ಲ, ಗಿದುವೆಯಿಲ್ಲ. ಹೆಂಡತಿಗೆ ಕಾಗದ ಬರೆ ಯೋದಕ್ಕಿಂತ ಹೆಚ್ಚಾಗಿ ಯೋಚನೆಮಾಡುತ್ತಿದ್ದೆಯಲ್ಲ ?' ಎಂದೆ.

'ಹೂಂ ಕಣೋ, ಹಾಗೆ ಆಗಿದೆ' ಎಂದು ಪುನಃ ಸೀಸದಕಡ್ಡಿಯಿಂದ ತಲೆಯನ್ನು ಕೆರೆಯುತ್ತ ಕುಳಿತುಕೊಂಡ.

'ಹಾಗಾದರೆ ನಾ ಹೋಗ್ತೀನಪ್ಪ' ಎಂದು ಎದ್ದೆ.

'ಈಗ ತಾನೆ ಬಂದಿದ್ದೀ. ಆಗಲೆ ಹೋಗುತ್ತೀಯ? ಸ್ವಲ್ಪ ಕೂತುಕೊ' ಎಂದು ಹೇಳಿ ಬರೆಯುವುದಕ್ಕಾರಂಭಿಸಿದ—ಎಂಟು ಗಂಟೆಯಾಗಿತ್ತು. ಮಿಲ್ಟನ್ ಓದುತ್ತಿದ್ದೆ; ಏನೋ ಬೇಜಾರಾಗಿತ್ತು; ಚಂದುವನ್ನು ನೋಡಿ ಕೊಂಡು ಹೋಗೋಣವೆಂದು ಬಂದೆ. ನನ್ನ ಪುಣ್ಯಕ್ಕೆ ಸರಿಯಾಗಿ, ಅವನಿಗೆ ಬರೆಯುವುದಕ್ಕೂ ತೋಚದ ಮಹತ್ತರವಾದ ಯೋಚನೆ. ಸ್ವಲ್ಪ ಹೊತ್ತು ಬರೆದುಕೊಳ್ಳಲೆಂದು ಮೇಜಿನ ಮೇಲಿದ್ದ—'ಪ್ರಬುದ್ಧ ಕರ್ಣಾಟಕ' ತೆಗೆದು ಕೊಂಡು—ಓದಲೂ ಇಲ್ಲ, ಏನೂ ಇಲ್ಲ—ಸುಮ್ಮನೆ ಹಾಳೆಗಳನ್ನು ತಿರುವುತ್ತಾ ಕುಳಿತುಕೊಂಡೆ. ಅರ್ಧಗಂಟೆಯಾಗುತ್ತಲು ಚಂದು ಸೀಸದ ಕಡ್ಡಿಯನ್ನು ಕಿವಿಯ ಸಂದಿಯಲ್ಲಿಟ್ಟುಕೊಂಡು ಕತ್ತೆತ್ತಿ ನನ್ನ ಕಡೆಗೆ ತಿರುಗಿ—'ಇಲ್ಲಿ ಕೇಳು ಕಿಟ್ಟು, ಇದನ್ನು ಓದುತ್ತೇನೆ. ಹೇಗಿದೆ ಆಮೇಲೆ ಹೇಳುವೆಯಂತೆ' ಎಂದನು. 'ನಿಮ್ಮ ಗುಟ್ಟೆಲ್ಲಾ ನಮಗೇಕಪ್ಪ' ಎಂದು ಒಂದು ಹಾಳೆ ತಿರುವಿದೆ. 'ಇರಲಿ, ಸ್ವಲ್ಪ ಕೇಳಬಾರದೆ?' ಎಂದು ಓದು ವುದಕ್ಕಾರಂಭಿಸಿದ :—

'ಸರೋಜ ಇನ್ನೂ ಚಿಕ್ಕವಳು; ಹನ್ನೊಂದು ವರುಷ ಇರಬಹುದು. ಆದರೂ ಅವಳ ವಯಸ್ಸಿಗೆ ಎತ್ತರವಾಗಿಯೇ ಬೆಳೆದಿದ್ದಳು. ಬಹಳ ಚೆಲುವೆ. ಒಂದು ದಿವಸ, ಅವಳಿಗೆ ಇಷ್ಟವಿಲ್ಲದಿದ್ದರೂ ಅವಳ ಗಲ್ಲವನ್ನು ಹಿಡಿದು ಸವರಿದ್ದೆ. ಅದು ಹೇಗಿತ್ತೆಂದರೆ, ಮುಟ್ಟಿದರೆ ಗಾಜಿನಂತೆ, ಇನ್ನೂ ಹೆಚ್ಚಾಗಿ ನುಣುಪು. ಆದರೆ ಗಾಜಿನಂತೆ ಗಟ್ಟಿಯಲ್ಲ, ಹತ್ತಿಯ ಹಾಗೆ. ಇನ್ನು ಅವಳ ಕಣ್ಣುಗಳಂತು ಹೇಳಲೇಬೇಕಾಗಿಲ್ಲ. ನಮ್ಮ ಲಕ್ಷ್ಮೀಶ ಮೊದಲಾದ ಕವಿಗಳು ಹೇಳುವ ಹಾಗೆ 'ಕುಂಜದಳ ನೇತ್ರೆ.' ತುಟಿಯ ಕೆಂಪು ಹವಳದ ಬಣ್ಣ, ಸಂಪಿಗೆಯ ಹೂವಿನಂತೆ ಎಸಳಾದ ಮೂಗು, ಎಲ್ಲಕ್ಕಿಂತಲೂ ಅವಳ ನಿಡಿಗುರುಳನ್ನು, ಅಳಿಕುಂತಳವನ್ನು ಕಂಡರೆ ನನಗೆ ಬಹಳ ಮೆಚ್ಚಿಗೆ. ಅವಳ ನಿಡಿಗುರುಳಿನಿಂದಲೇ ನನ್ನನ್ನು ಬಿಗಿದು ಕಟ್ಟಿಬಿಟ್ಟಿದ್ದಳು.'

ಇಲ್ಲಿಗೆ ನಿಲ್ಲಿಸಿ, 'ಹೇಗಿದೆ ಕಿಟ್ಟು?' ಎಂದು ನನ್ನನ್ನು ಕೇಳಿದ. 'ಕುಂಬಾರನಿಗೆ ಒಂದು ವರುಷ, ದೊಣ್ಣೆಗೆ ಒಂದು ನಿಮಿಷ' ಎನ್ನುವಂತೆ,

ಸಣ್ಣಕಥೆ ಬರೆಯುವುದಕ್ಕೆ ಹೊರಟಿರುವ ಹಾಗೆ ಕಾಣುತ್ತೆ. ಯಾಕೋ ಚೆನ್ನಾಗಿಲ್ಲ ಕಣೋ ' ಎಂದೆ.

' ಹೆತ್ತವರಿಗೆ ಹೆಗ್ಗಣ ಮುದ್ದು ' ಎನ್ನುವಂತೆ ತಮ್ಮದು ತಮಗೇ ಚೆಂದ. ನಾನು ಅವನ ಕಥಾಭಾಗವನ್ನು ಚೆನ್ನಾಗಿಲ್ಲವೆನ್ನುತ್ತಲು ಅವನಿಗೆ ಕೋಪ ಬಂತು. ಇದ್ದಕಿದ್ದಹಾಗೆ—' ಎಲ್ಲಿ, ನೀನು ಬರಿ, ನೋಡೋಣ? ನನ್ನ ದೇನೋ ಚೆನ್ನಾಗಿಲ್ಲ ' ಎಂದು ತಾನು ಬರೆದಿದ್ದುದನ್ನು ಚಿಂದಿಚಿಂದಿಯಾಗಿ ಹರಿದು ಬಿಸುಟನು. ರೇಗಿಸಿದ್ದಾಯಿತು. ' ಕೋಪವೇತಕ್ಕಪ್ಪ? ನಿನ ಗೇನೋ ಚೆನ್ನಾಗಿದೆ. ನಾನು ಹೇಳಿದ್ದು ಈಗಿನ ' ಟೆಂಡೆನ್ಸಿ ' (Tendency) ವಿಚಾರ. ಈಗಿನವರಿಗೆ ನೀನು ಈಗ ಬರೆಯುವ ಕಥೆ ರುಚಿಸುವುದಿಲ್ಲವೆಂದು ಗೊತ್ತು. ಅವರಿಗೆಲ್ಲಾ ' ರಂಗಪ್ಪನ ಮದುವೆ, ' ಅದು, ಇದು, ಅಂತು ಮದುವೆ ಆಗಿ ಆಗಿ ಬೇಸರವಾಗಿ ಹೋಗಿದೆ. ಚಿರೋಟಿ ತಿಂದು ಸಾಕಾಗಿದೆ ಯಂತೆ ಅವರಿಗೆ; ಚಟ್ನಿ ಬೇಕಂತೆ. ನಿನ್ನ ಕಥೆಯ ಮೊದಲನ್ನು ನೋಡಿದ ಕೂಡಲೆ ಅದು ಮದುವೆಯ ಸಂಬಂಧವಾದದ್ದು ಎಂದು ತೋಚಿತು. ಚೆನ್ನಾಗಿಲ್ಲ ಎಂದೆ ಇಷ್ಟೆ. '

' ಹೇಳೋರಿಗೇನು, ಸಾವಿರ ಹೇಳುತ್ತಾರೆ. ಬರೆಯೋಕೆ ಕುಳಿತಾಗ ರಾಯರ ಬೇಳೇಕಾಳು ಗೊತ್ತಾಗುತ್ತೆ. ಹಾಗಾದರೆ ಏನು ಮಾಡಬೇಕು ಅನ್ನುತ್ತೀಯ? '

' ಏನೂ ಇಲ್ಲ. ಹಳೇಕಥೆಗಳನ್ನು ಉದ್ಧಾರಮಾಡು. ಹೊಸ ಮಾದರಿ ಯಲ್ಲಿ ಕಥೆಗಳನ್ನು ಬರಿ. ಬರೆಯುವರೊಬ್ಬರಾದರೆ ವಿಷಯಕ್ಕೇನು, ಬೇಕಾ ದಷ್ಟಿದೆ. ನಾಳೆ ರಾತ್ರಿ ಪುರಸತ್ತಾದರೆ ನಮ್ಮ ಮನೆಗೆ ಬಾ. ಅಜ್ಜಿ ಶಾಮಿಗೆ ಹೇಳುವ ಕಥೆಗಳಿಗೆ ನೀನು ಸ್ವಲ್ಪ ಕಿವಿಗೊಟ್ಟದ್ದೇ ಆದರೆ, ಒಂದು ರೀಮ್ ಕಾಗದವಾದರೂ ನಿನಗೆ ಸಾಕಾಗೋದಿಲ್ಲ. '

' ಇಷ್ಟಕ್ಕೆ ನಿನ್ನನ್ನೇ ಕೇಳಬೇಕಾಗಿತ್ತೆ? ಅಡುಗೂಳಜ್ಜಿ ಕಥೆ ಕೇಳೋಕೆ ನಾನೇನು ಶಾಮಿಯೋ, ಇಲ್ಲ ಲಲಿತನೊ? ನನ್ನನ್ನೇನು ಲೇವಡಿ ಮಾಡುವ ಹಾಗೆ ಕಾಣುತ್ತೆ. '

' ಸಿಟ್ಟುಮಾಡಿಕೊಳ್ಳಬೇಡವೆಂದು ನಾನು ಮೊದಲೇ ಹೇಳಲಿಲ್ಲವೇ? ನಿಜವಾಗಿಯೂ ನೀನು ಕಥೆಗಾರನಾಗಬೇಕಾದರೆ ನಮ್ಮಜ್ಜಿಯ ಕಥೆಗಳನ್ನು

ಕೇಳಿ ಅವುಗಳನ್ನು ಬರೆಯಬೇಕು. ನಮ್ಮ ಮನೆಗೆ ಬರುವುದಕ್ಕೆ ನಿನಗೆ ನಾಚಿಕೆಯೇನೋ, ಪಾಪ. ಅಣ್ಣನನ್ನು ನೀನೇನು ಕಂಡಿಲ್ಲವೆ. ಅಮ್ಮನ ಕೂಡ ಲಲಿತ ಚೆನ್ನಾಗಿದಾಳೆಂದು ನೀನೇ ಹೇಳಿದ್ದೆ. ಅಮ್ಮನ ಮುಂದೂ ನಿನಗೆ ನಾಚಿಕೆಯೆ ? ಅದೂ ಅಲ್ಲದೆ ಅಮ್ಮನಿಗೇನೋ ಮೈಗೆ ಚೆನ್ನಾಗಿಲ್ಲ. ಒಳಗೇ ಮಲಗಿರುತ್ತಾಳೆ. ಅಣ್ಣ 'ಸರ್ಕಿಟ್' ಹೋಗಿದಾನೆ. ಬರಬೇಕಾದರೆ ಇನ್ನೂ ಐದು ಆರು ದಿವಸಗಳಾಗಬಹುದು. ಎಷ್ಟೇ ಆಗಲಿ ದೊಡ್ಡ ಮನುಷ್ಯರಪ್ಪ ನೀವು. ನಮ್ಮ ಮನೆಗೆಲ್ಲಾ ಬರುತ್ತೀರ ?'

'ಅಂಥಾದ್ದೇನಿಲ್ಲ, ಕಿಟ್ಟು. ನಾನು ಈ ಊರಿನಲ್ಲಿ ಒಬ್ಬನೇ ಒಂದು ರೂಮಿನಲ್ಲಿರುವಾಗ ನಿಮ್ಮ ಮನೆಯವರೆಲ್ಲ ತಂದೆ–ತಾಯಿಗಳಿಗಿಂತಲೂ ಹೆಚ್ಚಾಗಿಬಾರೆ. ಆ ವಿಚಾರ ಇರಲಿ. ನಿಮ್ಮ ತಾಯಿಗೆ ಹುಷಾರಿಲ್ಲವೆಂದೆಯಲ್ಲ, ಅವರನ್ನು ನೋಡಿದ ಹಾಗೂ ಆಯಿತು, ಕಥೆ ಕೇಳಿದ ಹಾಗೂ ಆಯಿತು, ನೋಡಿಬಿಡೋಣ, ಎಷ್ಟು 'ರೀಮ್' ಕಾಗದ ಖರ್ಚಾಗುತ್ತೆ. ನೀನು ಮಟ್ಟಿಗೆ ಕಥೆ ಕೇಳೋಕೆ ಬರುತ್ತಾನೆ ಅಂತ ಹೇಳಬೇಡ, ಯಾರಾದರೂ ನಕ್ಕಾರು. ಏನೋ ಪಾಪ, ಬೇಜಾರಾಗುತ್ತೆ; ಬರುತ್ತಾನೆ ಅಂತ ಹೇಳು ನಿಮ್ಮಜ್ಜಿ ಸಂಗಡ. ಹಾಗಾದರೆ ನಾಳೆ ಎಷ್ಟುಹೊತ್ತಿಗೆ ಬರಲಿ ?'

'ಏಳುವರೆ, ಎಂಟರ ಹೊತ್ತಿಗೆ ಬಾ' ಎಂದು ಮನಸ್ಸಿನಲ್ಲೇ ನಕ್ಕೆ. ಎಲ್ಲಾಬಿಟ್ಟು ಕಥೆ ಬರೆಯುವ ಹುಚ್ಚು ಇವನಿಗೇಕೆ ಅಂಟಿತು ಎನಿಸಿತು.

*                *                *                *

'ಸೋಮಪುರಿ ಸೋಮಪುರಿ ಅಂತೊಂದೂರು. ಅಲ್ಲಿ ಸೋಮಶೇಖರರಾಯ ಸೋಮಶೇಖರರಾಯ ಅಂತ ಒಬ್ಬ ರಾಜ. ಧರ್ಮರಾಯನ ಹಾಗೆ ಧರ್ಮದಿಂದ ರಾಜ್ಯವಾಳುತ ಇದ್ದ. ಅವನಿಗೆ ಮಂತ್ರಿ, ಸಾವುಕಾರ, ಕೋಲುಕಾರ—ಎಲ್ಲಾ ಇದ್ದರು. ಆ ದೊರೆಗೆ......ಶಾಮಿ, ಲಲಿತ– 'ಹೂ ಅನ್ನದೆ ಹೋದರೆ ನಾನು ಕಥೇನೂ ಹೇಳೋಲ್ಲ. ದೋಸೇನೂ ಕೊಡೋಲ್ಲ.' ಎಂದು 'ಚೊಂಯ್' ಎನ್ನಿಸಿದರು ಬಾಣಲೆಯಲ್ಲಿ. ಶಾಮಿ, ಲಲಿತ, ಹುಂ, ಹುಂ, ಎಂದು ಹೂಂ ಗುಟ್ಟಿದರು. ನಾನೂ ಹೂಂ ಎಂದೆ. ಆಮೇಲೆ ನಮ್ಮಜ್ಜಿ ನನ್ನ ಕಡೆ ತಿರುಗಿ-'ಏನೋ ಕಿಟ್ಟು, ನೀನು ಓದಿ ಮುಂದು

ಮೋಚಿಕೊಂಡೆ. ಕಥೆ ಕೇಳೋಕೆ ನೀನೇನು ಲಲಿತನೆ. ಉಪವಾಸ ಮಾಡೋ ಕಾಗುಲ್ಲ ನನ್ನ ಕೈಲಿ. ಏನೋ ಒಂದೆರಡು ದೋಸೆ ಕೆತ್ತುಕೊಂಡಿದ್ದರೆ, ಶಾಮಿ ಲಲಿತನ ಜೊತೆಗೆ ನೀನೊಬ್ಬ' ಎಂದು ಲೊಟಗಿದರು. ಇದೇ ಸಮಯ ಎಂದು—'ಅಜ್ಜಿ, ಚಂದು ಬಂದಿದಾನೆ' ಎಂದೆ. ಸರಿ; ಮಗುಚುವ ಕೈಯನ್ನು ಕೆಳಗಿಟ್ಟರು; ಒಂದು ಬಿಡಿಯೆಲೆಯನ್ನು ಕೈಗೆ ತೆಗೆದುಕೊಂಡರು. ನನ್ನ ಹಿಂದೆ ಮರೆಯಲ್ಲಿ ಕುಳಿತಿದ್ದ ಚಂದು ಮೇಲಕ್ಕೆದ್ದ. ಕೈ ಹಿಡಿದು ಕೆಳಗೆಳೆದು ಕೂರಿಸಿ ಚಿಗುಟಿದೆ. ಏನೋ ಕುಳಿತುಕೊಂಡ. ಆಗಲೆ ಎರಡೆಲೆ ಮೇಲೆ ಎರಡೆರಡು ದೋಸೆ ಸಿದ್ಧವಾಗಿದ್ದುವು. ಒಂದನ್ನು ನಾನು ತೆಗೆದು ಕೊಂಡೆ, ಇನ್ನೊಂದನ್ನು ಚಂದುವಿಗೆ ಕೊಡುವುದಕ್ಕೆ ಹೋದೆ. ಬೇಡವೆಂದ. 'ಅದೆಲ್ಲ ಗೊತ್ತಿದೆ, ತಗೋಪ್ಪ' ಎಂದೆ. ತೆಗೆದುಕೊಂಡ. ಇಬ್ಬರೂ ಫಲಾ ಹಾರಕ್ಕೆ ಕುಳಿತೆವು. ನಮ್ಮ ಅಜ್ಜಿ ನಾವು ತಿನ್ನುವಾಗ 'ಚಂದು, ನೀನು ನಮ್ಮ ಮನೆಗೆ ಬರುವುದು ಬಹಳ ಅಪರೂಪ. ಇದೇನು ಇವತ್ತು ಬಂದೆ ಯಲ್ಲ?' ಎಂದು, ಇನ್ನು ಸ್ವಲ್ಪ ಹೆಚ್ಚಾಗಿ ತುಪ್ಪ ಹಾಕಿದರು. ಕಥೆ ಕೇಳು ವುದಕ್ಕೆ ಬಂದೆ ಎನ್ನುವುದೆ ಅಷ್ಟು ದೊಡ್ಡವನಾಗಿ? ಅದೂ ಅಲ್ಲದೆ ನಮ್ಮಜ್ಜಿ ನನ್ನನ್ನು ಬೈದಿದ್ದು ಕೇಳಿದ್ದ. ನಮ್ಮ ತಾಯ ಯೋಗಕ್ಷೇಮವನ್ನು ವಿಚಾ ರಿಸುವುದಕ್ಕೆ ಒಂದೆ ಎನ್ನುವುದಕ್ಕೆ ನಾಚಿಕೆ. ಸುಮ್ಮನೆ ಇದ್ದ. 'ಏನೂ ಇಲ್ಲ, ಸುಮ್ಮನೆ ಬಂದ ನನ್ನ ಬಲವಂತಕ್ಕೆ' ಎಂದು ಅವನ ಮಾತನ್ನು ನಾನೇ ಆಡಿದೆ.

'ಆಗಾಗ್ಗೆ ಹೀಗೇ ಬರುತ್ತಾ ಇರಪ್ಪ. ಹಾಗಂತ ಓದೋಕೆ ಅಡ್ಡಿ ಮಾಡಿಕೋಬೇಡ. ಚೆಂಡಾಡಿಕೊಂಡು ಮನೆಗೆ ಹೋಗುವಾಗ ಪುರಸತ್ತಾ ದರೆ ಇಲ್ಲಿಗೂ ಬಂದುಹೋಗು. ನಮ್ಮ ಮನೆ ಬರಬಾರದ ಮನೆಯೆ? ನಿಮ್ಮಜ್ಜಿ, ಅವರು, ಕೂಡ ಹುಟ್ಟಿದವರಲ್ಲವೆ' ಎಂದು ಅಲ್ಲಿಗೇ ನಿಲ್ಲಿಸಿ- 'ಲಲಿತ, ಚಂದೂಗೆ ಕೈಗೆ ನೀರು ತಂದು ಕೊಡೆ' ಎಂದರು. ಲಲಿತ, 'ಉಹುಂ' ಎಂದಳು. 'ನಿನ್ನ, ಚಂದೂಗೇನು ಕೊಡಲ್ಲ. ಹೋಗು, ಇರಲಿ ಕಂಡಿದೀನಿ' ಎಂದು ನಾನು ಗದರಿಸಿದೆ. ನನ್ನ ಮಾತು ಕೇಳುತ್ತಾಳೆಯೆ? ಕೊನೆಗೂ ನಾನೇ ನೀರನ್ನು ತರಬೇಕಾಯಿತು.

* * * *

ಚಂದು ದಿನಬಿಟ್ಟು ದಿನ ಅಥವಾ ಮೂರು ನಾಲ್ಕು ದಿನಗಳಿಗೊಂದಾವೃತ್ತಿ ನಮ್ಮ ಮನೆಗೆ ತಪ್ಪದೆ ಬರುತ್ತಿದ್ದ. ನಮ್ಮಜ್ಜಿಯ ಕಥೆಗಳು ಅವನಿಗೆ ಬಹಳ ರುಚಿಸಿರಬೇಕು. ಹಾಗಿಲ್ಲದಿದ್ದರೆ, 'ಅಡುಗೂಳಜ್ಜಿಯ ಕಥೆಗಳನ್ನು ಕೇಳುವುದಕ್ಕೆ ನಾನೇನು ಶಾಮಿಯೆ' ಎಂದ ಮನುಷ್ಯ ನಮ್ಮಜ್ಜಿಯ ಕಥೆಗಳನ್ನು ಕೇಳುವುದಕ್ಕೆ ಬರುತ್ತಿದ್ದನೆ? ನಮ್ಮಮ್ಮನೂ ಸ್ವಲ್ಪ ಹಾಸಿಗೆಯಿಂದ ಎದ್ದಿದ್ದರು. ನಮ್ಮ ತಂದೆಯೂ 'ಸರ್ಕಿಟ್' ಪೂರೈಸಿಕೊಂಡು ಹಿಂದಿರುಗಿ ಬಂದಿದ್ದರು. ಆದರೂ ಚಂದುವೇನೋ ತಪ್ಪದೆ ಬರುತ್ತಿದ್ದ. ನಮ್ಮ ತಾಯಿಯೊಡನೆ ನಾಚಿಕೆಯನ್ನು ಬಿಟ್ಟಿದ್ದನೆಂದು ಕಾಣುತ್ತೆ. ಅಂತು, ಅವನು ರಾತ್ರಿಹೊತ್ತು ಬಂದ ದಿನವೆಲ್ಲ ನಮ್ಮಜ್ಜಿ ಅವನಿಗೆ ತಾವು ಮಾಡಿಕೊಂಡಿದ್ದ ದೋಸೆಯನ್ನೋ, ರೊಟ್ಟಿಯನ್ನೋ, ಉಪ್ಪಿಟ್ಟನ್ನೋ, ಇಲ್ಲದೆ ಹೋದರೆ, ಮೊಸರವಲಕ್ಕಿಯನ್ನೋ ಕೊಡುತ್ತಿದ್ದರು. ಅವನು ಬೇಡವೆಂದು ಹೇಳುತ್ತಿದ್ದ. ನಮ್ಮ ತಾಯಿ 'ಏನಪ್ಪ, ಅಳಿಯಂದರಿಗೂ ಇಷ್ಟು ಬಿಗುಮಾನವಿಲ್ಲ'ವೆಂದರೆ, ಸುಮ್ಮನೆ ಬಾಯಿಮುಚ್ಚಿಕೊಂಡು—ಅಲ್ಲ, ಆ ಎಂದು ಬಾಯಿ ಬಿಟ್ಟುಕೊಂಡು—ತಿಂದುಬಿಡುತ್ತಿದ್ದ. ಲಲಿತ ಮೊದಲಿನಂತೆ ನಾಚಿಕೊಳ್ಳದೆ ಕೈಗೆ ನೀರನ್ನು ಹಾಕುತ್ತಿದ್ದಳು.

* * * *

ಇಂದು ಭಾನುವಾರ. ಚಂದುವಿನ ರೂಮಿಗೆ ಎಂದಿನಂತೆ ಹೋದೆ. ಮೇಜಿನ ಬಳಿ ಏನನ್ನೋ ಬರೆಯುತ್ತಾ ಕುಳಿತಿದ್ದ. ತಿಳಿದೇ ಇದೆಯಲ್ಲ, ಸಣ್ಣಕಥೆ ಎಂದುಕೊಂಡೆ. ನಾನು ಹೋದೊಡನೆ ಅದನ್ನು ಮುಚ್ಚಿಟ್ಟನು. ಸುತ್ತಿಕೊಂಡು ಬರಲು ಕರೆದೆ. ತಾನು ಬರೆದಿದ್ದ ಕಾಗದಗಳನ್ನೂ ಮತ್ತು ಜೊತೆಗೆ ಇನ್ನು ಸ್ವಲ್ಪ ಬಿಡಿ ಕಾಗದಗಳನ್ನೂ ಸರಿಯಾಗಿ ಜೋಡಿಸಿ, ಮಡಿಸಿ, ತನ್ನ ಜೇಬಿನೊಳಕ್ಕೆ ತುರುಕಿದ. 'ನಡಿಯಪ್ಪ' ಎಂದು ರೂಮಿಗೆ ಬೀಗ ಹಾಕಿ, ಎರಡುಸಲ ಎಳೆದು ನೋಡಿ, ನನ್ನ ಜೊತೆಗೆ ಬಂದ. 'ಸಿನಿಮಾಕ್ಕೆ ಹೋಗೋಣ, ಬಹಳ ಚೆನ್ನಾಗಿದೆ. ಡೊಗ್ಲಾಸ್ ಫೇರ್ ಬಾಂಕ್ಸ್ ಕಣೋ, ಇವತ್ತು' ಎಂದೆ. 'ಕಣ್ಣು ಉರಿಯುತ್ತಾ ಇದೆ. ಬೇಡಪ್ಪ, ನಿಷಾತ್' ಬಾಗಿಗೆ ಹೋಗೋಣ, ತಣ್ಣಗೆ ಗಾಳಿ ಬೀಸುತ್ತೆ' ಎಂದು ನನ್ನ ಭುಜದ ಮೇಲೆ ಕೈಹಾಕಿದ. ನಾನು ಹಾಕಿದ ಪ್ರಶ್ನೆಗೆಲ್ಲ 'ಹುಂ,' 'ಇಲ್ಲ,'

ಇಷ್ಟೆ. ದಾರಿಯಲ್ಲಿ ಹೋಟಲಿಗೆ ನುಗ್ಗಿದೆವು. 'ಎರಡರ್ಧ ಕಾಫಿ' ಎಂದೆ. 'ಕಾಫಿಯಂತೆ ಕಾಫಿ, ಅದು ಮಹಾ ಕೆಟ್ಟದು' ಎಂದು ಒಂದು ಕಪ್ ಹಾಲನ್ನು ತನಗೆ ತರಿಸಿಕೊಂಡ. ಕೊನೆಗೆ ಆರು ಗಂಟೆಯ ಹೊತ್ತಿಗೆ ನಿಷಾತ್ ಬಾಗಿಗೆ ಹೋದೆವು. ಹುಲ್ಲು ಹಾಸಿನ ಮೇಲೆ ಪವಡಿಸಿದೆವು.

ಚಂದು ಪ್ರಾರಂಭಿಸಿದ. 'ಸಿನಿಮಾ ಎಂಬೆಯಲ್ಲ, ಅದೆಲ್ಲಿ, ಇದೆಲ್ಲಿ! ಎಷ್ಟು ಹಿತಕರವಾಗಿದೆ ನೋಡು, ನಮ್ಮನ್ನು ನಾವೇ ಮರೆತು ಬಿಡುವ ಹಾಗಿದೆ!'

'ಡೊಗ್ಲಾಸ್ ಫೇರ್‌ಬಾಂಕ್ಸೂ ನಮ್ಮನ್ನು ನಾವೇ ಮರೆಯುವಂತೆ ಮಾಡುತ್ತಾನೋ. ಚಾರ್ಲಿಯಂತು ಸ್ವರ್ಗಸುಖವನ್ನೆ ಕೊಡುತ್ತಾನೆ. ನನ್ನನ್ನೂ ನಾನೇ ಮರೆತರೂ ಸರಿಯೆ, ಚಾರ್ಲಿಯ 'ಸರ್ಕಸ್' ಎಂದೆಂದೂ ಮರೆಯುವದಿಲ್ಲ. ಸಿನಿಮಾ ನೋಡಬೇಕು, ಸುಖಪಡಬೇಕು!'

'ಎಲ್ಲಿಯ ವರೆಗೆ— ವಿರಾಮವಿರುವವರೆಗೆ. ಆಮೇಲೆ ಹಿಂದಿರುಗಿ ನೋಡೋದು, ಕತ್ತು ಮಿಸುಕಿಕೊಳ್ಳುವುದು; ಕೊನೆಯಲ್ಲಿ ಕಣ್ಮುಚ್ಚಿ ಕೊಳ್ಳುವುದು. ಇಲ್ಲಿ ನೋಡು-ಕೆಳಗೆ ಪಚ್ಚೆಯ ಹಾಸು. ಮೇಲೆ ನೀಲಿಯ ಆಕಾಶ. ಇನ್ನು ತುಸ ಹೊತ್ತು ಹೋದರೆ ಪಶ್ಚಿಮದಲ್ಲಿ ಸಂಧ್ಯಾರಾಗ. ಆಕಾಶದಲ್ಲಿ ಮಿನುಗುಟ್ಟುತ್ತಿರುವ ತಾರೆಗಳು. ಬಾಂದಳದಲ್ಲಿ ತಮ್ಮ ಗೂಡು ಗಳನ್ನೈದುತ್ತಿರುವ ಪಕ್ಷಿಗಳ ಸಮೂಹ. ಮರಗಳಲ್ಲಿರುವ ಪಕ್ಷಿಗಳ ಕಲಕಲರವ. ಇವುಗಳನ್ನು ನೋಡುತ್ತಾ ನೋಡುತ್ತಾ ಆಗಲೇ ನಿನ್ನನ್ನು ಮರೆತಿರುವಂತೆ ನನಗೆ......'

'ಮರೆತರೂ ಮರೆತಿಯೆ. ಎಷ್ಟೇ ಆಗಲಿ ದೊಡ್ಡಮನುಷ್ಯ. ಜೊತೆಗೆ ಕವಿ ಬೇರೆ. ಇಲ್ಲಾಗಲೇ ನಿನ್ನ ಕವಿತ್ವ ಬಿಚ್ಚಿದೆ. ಹೋಗಲಿ, ಕಥೆ ಬರೆದೆ ಯೇನು? ಅದಕ್ಕೆ ಹೆಸರು ಏನು ಕೊಟ್ಟೆ?'

ಸ್ವಲ್ಪ ಹೊತ್ತು ಮೌನವಾಗಿದ್ದು ಅನಂತರ 'ಯಾರಿಗೂ ಹೇಳಬೇಡ, ಕಂಡೆಯ? ಇದು ಮೊದಲಿನ ಮಾತು. ನೀನು ಹೇಳಿದಂತೆ ಒಂದು ನವೀನ ವಾದ ಕಥೆ ಬರೆದಿದ್ದೇನೆ. ಹೆಸರನ್ನು ನೋಡಿದೊಡನೆಯೇ ಕಥೆಯಲ್ಲಿ ಅಭಿ ರುಚಿ ಹುಟ್ಟುವುದು' ಎಂದು ಜೇಬಿನಿಂದ ಒಂದು ಕಂತೆಯನ್ನು ಹಿರಿದು ನನ್ನ ಮುಂದಿಟ್ಟನು. ಇನ್ನೂ ಸ್ವಲ್ಪ ಬೆಳಕಿದ್ದದ್ದರಿಂದ ಮಬ್ಬಾಗಿ ಎಲ್ಲಾ

ಅಕ್ಷರಗಳೂ ಕಾಣುತ್ತಿದ್ದುವು. ಮೊದಲನೆಯ ಪುಟದ ಮೇಲುಗಡೆ ' ದೋಸೆಯ ಮೇಲಿನ ಆಸೆಯೋ ?' ಎಂದು ಬರೆದಿತ್ತು. ಹಾಳೆಗಳನ್ನು ತಿರುವುತ್ತಾ ಕುಳಿತೆ. ಅಲ್ಲಲ್ಲಿ 'ಮನೋರಮೆ . . . . . . ಪ್ರೇಮ . . . . . . ಮದುವೆ' ಎಂಬ ಮಾತುಗಳು ಗೋಚರಿಸಿದುವು. ನನ್ನ ಆಶ್ಚರ್ಯಕ್ಕೆ, ಒಂದು ಕಡೆ ' ಮುತ್ತುಕೊಟ್ಟ ' ಎಂದಿತ್ತು. ಸರಿ! ವಿಹಾಹದ ಕಥೆ ಎಂದುಕೊಂಡೆ.

' ಏನು ಚಂದು, ನಿನಗೆ ' ವಿವಾಹ, ಪ್ರೇಮ, ಚೆಲುವು ' ಇವನ್ನೆಲ್ಲಾ ಬಿಟ್ಟು ಕಥೆ ಬರೆಯುವದಕ್ಕಾಗುವುದಿಲ್ಲವೋ ? ' ಎಂದು ಕೇಳುತ್ತಲು,

' ಲೋಕವಿರುವುದು ಆದರಿಂದ, ಮುಂದೆ ಬೆಳೆಯುವುದೂ ಅದರಿಂದ. ನಾವು ಅದನ್ನಲ್ಲದೆ ಇನ್ನೇನನ್ನ ಬರೆಯೋಣ ? ಆದರೆ ನನ್ನ ಕಥೆಯಲ್ಲಿ ಪ್ರೇಮ-ಗೀಮದ ವಿಷಯ ಮುಖ್ಯವಲ್ಲ. ಓದಿ ನೋಡು. ಆಮೇಲೆ ಗೊತ್ತಾಗುತ್ತೆ. ' ಎಂದು ಉತ್ತರಕೊಟ್ಟ.

' ಹಾಗಾದರೆ ಅದರಲ್ಲಿರುವ ಮುಖ್ಯ ವಿಷಯವೇನು ? '

' ನೀನೇ ನನಗೆ ಬೋಧಿಸಿದೆಯಲ್ಲ— ಕಥೆ ಬರೆಯುವರೆಲ್ಲ ಅಡುಗೂಳಜ್ಜಿಯ ಕಥೆಗಳನ್ನು ಕೇಳಿ ಬರೆಯಬೇಕೆಂದು. '

' ಹಾಗಾದರೆ, ' ದೋಸೆಯ ಮೇಲಿನ ಆಸೆಯೋ ? ' ಎಂದು ನಿನ್ನ ಕಥೆಗೆ ನಾಮಕರಣ ಮಾಡಿದ್ದೀಯಲ್ಲ, ಅದರ ಅರ್ಥವೇನು ? '

' ಏನೂ ಇಲ್ಲ, ಇಷ್ಟೆ. ಅವರಿಂದ ಕಥೆ ಕೇಳುವುದಲ್ಲದೆ ಲಲಿತ ಶಾಮಿಯಂಥವರು ಇದ್ದರೆ ಅವರ ಜೊತೆಯಲ್ಲಿ, ದೋಸೇಗೀಸೆ ಮೊದಲಾದುವು ಸಿಕ್ಕುತ್ತವೆಂದು. '

' ಹಾಗಾದರೆ ನಾಳೆ ಓದಿನೋಡುತ್ತೀನಪ್ಪ ' ಎಂದು ಎದ್ದೆ. ಅವನೂ ಎದ್ದ.

ದಾರಿಯುದ್ದಕ್ಕೂ ಏನೇನನ್ನೋ ಮಾತನಾಡಿಕೊಂಡು ಹೋದೆವು. ಕೊನೆಗೆ ಅವನ ರೂಮಿನ ಬಳಿಗೆ ಸೇರಿದೆವು. ರೂಮಿಗೆ ಹೋಗುವುದಕ್ಕೆಂದು ' ಬರ್ತೀನಪ್ಪ ಕಿಟ್ಟು ' ಎಂದು ಕಾಲ್ನಡೆಯನ್ನು ವೇಗ ಮಾಡಿದ. ' ಮನೆಗೆ ಬಂದು ಹೋಗುವೆಯಂತೆ ' ಎಂದು ಅವನಿಗೆ ಇಷ್ಟವಿಲ್ಲದಿದ್ದರೂ— ನನಗೆ ಹಾಗೆ ತೋರಿತು— ಅವನನ್ನು ಎಳೆದುಕೊಂಡು ಮನೆಗೆ ಹೋದೆ. ಅಷ್ಟು ಹೊತ್ತಿಗೆ, ' ಹನೆಗೇಳ್ಳೈ ಸುಂದರ '

ಎಂದು ಲಲಿತೆ ಗಟ್ಟಿಯಾಗಿ ಹಾಡು ಹೇಳುತ್ತಿದ್ದಳು. ಬಾಗಿಲಿನ ಸಮೀಪಕ್ಕೆ ಬಂದೆವು. ಆಗ ಚಂದು 'ಲಲಿತೆಯ ದನಿ ಎಷ್ಟು ಚೆನ್ನಾಗಿದೆ! ಒಳ್ಳೆ ಕೋಗಿಲೆಯಂತೆ ಇದೆಯಲ್ಲವೆ, ಕಿಟ್ಟು? ಅವಳಿಗೆ ಸಂಗೀತ ಏತಕ್ಕೆ ಹೇಳಿಸ ಬಾರದೊ ನೀವು? ಅವಳಿಗೆ ಮದುವೆಯಾದ ಮೇಲೆ ಗಂಡನನ್ನು ಅವಳ ಸಂಗೀತದಿಂದ ಸಂತೋಷಸಾಗರದಲ್ಲಿ ಖಂಡಿತವಾಗಿಯೂ ಮುಳುಗಿಸಿ ಬಿಡುತ್ತಾಳೆ. ನನಗೂ ಸಂಗೀತದಲ್ಲಿ ಸ್ವಲ್ಪ ಅಭಿರುಚಿ ಇದೆ ಕಿಟ್ಟು' ಎಂದು ನನ್ನನ್ನು ನಿಲ್ಲಿಸಿಕೊಂಡು ಹೇಳಿ, 'ಸ್ವಲ್ಪ ಬರೆಯುವದಿದೆ, ಬರುತ್ತೇನಪ್ಪ' ಎಂದು ಹೇಳಿ ಹಿಂದಿರುಗಲು ಪ್ರಯತ್ನಪಟ್ಟ. ನಾನು ಕೊನೆಗೂ ಬಿಡಲ್ಲಿಲ್ಲ. ಮನೆಗೆ ಎಳೆದುಕೊಂಡು ಹೋದೆ. ಹಜಾರವನ್ನು ಇಬ್ಬರೂ ಹೊಕ್ಕೆವು. ಚಂದುವಿನ ಮುಖವನ್ನು ಕಂಡೊಡನೆಯೇ ಲಲಿತ ಕೋಣೆಗೆ ಓಡಿದಳು. ಅವಳು ಎಂದೂ ಅವನನ್ನು ನೋಡಿ ಹೀಗೆ ಓಡಿರಲಿಲ್ಲ. ನನಗೆ ಆಶ್ಚರ್ಯ ವಾಯಿತು.

೩

ಪರೀಕ್ಷೆಗೆ ಇನ್ನೂ ಎರಡು ತಿಂಗಳಿತ್ತು. ಎಷ್ಟೋಜನ ಓದುವುದಕ್ಕೆ ಪ್ರಾರಂಭಿಸಿದ್ದರು. ಆದರೆ ನನ್ನ ರೀತಿಯೇ ಬೇರೆ. ಚಂದುವೂ ನನ್ನಂತೆ; ನನ ಗಿಂತಲೂ ಹೆಚ್ಚು. ಅದರ ಜೊತೆಗೆ ಪರೀಕ್ಷಾಸಮಯದಲ್ಲೂ ಅವನು ಕವಿತೆ ಗಳನ್ನು ಬರೆಯುವದರಲ್ಲೇ ಮಗ್ನನಾಗಿರುವನು. ಅವನು ಸರಿಯಾಗಿ ಓದುವುದಕ್ಕಾರಂಭಿಸಬೇಕಾದರೆ ಇನ್ನೂ ಒಂದು ತಿಂಗಳು ಬೇಕು. ಹೀಗಿ ದ್ದರೂ ನಮ್ಮ ಮನೆಯ ಕಡೆಗೆ ಸುಳಿಯುವುದನ್ನೇ ಬಿಟ್ಟುಬಿಟ್ಟಿದ್ದ. ಕಾಲೇಜಿ ನಲ್ಲಿ ವಿನಾ ನಾನೂ ಅವನ ರೂಮಿಗೆ ಹೋಗಿ ಅವನನ್ನು ಕಾಣುವುದನ್ನೂ ಬಿಟ್ಟಿದ್ದೆ—ಮುಯ್ಯಿಗೆ ಮುಯ್ಯಿ. ಕ್ಲಾಸಿನಲ್ಲೂ ನಾನಿದ್ದೆಡೆಯನ್ನೇ ಸೇರು ತ್ತಿರಲಿಲ್ಲ. ಒಂದೊಂದು ಸಾರಿ ನನ್ನನ್ನೇ ದುರುಗುಟ್ಟಿಕೊಂಡು ನೋಡು ತ್ತಿದ್ದ. ನನ್ನ ಮೇಲೆ ಅವನಿಗೆ ಕೋಪವಿರಬಹುದೇ ಎನ್ನುವ ಸಂಶಯ ನನ್ನಲ್ಲಿ ತಲೆದೋರಿತು. ಆದರೆ ಅವನಿಗೆ ಕೋಪಬರುವಂಥ ಮಾತನ್ನು ಅವ ನೊಡನೆ ನಾನು ಆಡಿರಲಿಲ್ಲ. ಏನಾದರೂ ಆಗಲೆಂದು ನಾನು ಸುಮ್ಮನಿದ್ದೆ.

ಒಂದು ದಿವಸ ಊಟಮಾಡುತ್ತಿರುವಾಗ ನಮ್ಮ ತಂದೆ 'ಕಿಟ್ಟು, ಚಂದ್ರೂನ ಏನೋ ಅಂತಿವ್ವೆ. ಅವನಿಗಿಂತಲೂ ನೀನೇ ಒಳ್ಳೆಯವನು, ಬುದ್ಧಿಶಾಲಿ. ಪರೀಕ್ಷೆಯ ಕಾಲ ಬಂತು. ಅವನ ರೂಮಿಗೇಕೆ ಸದಾ ಹೋಗುತ್ತಿ? ಯಾವಾಗಲೂ ಅತಿಸ್ನೇಹ ಕೆಟ್ಟದು. ಎಷ್ಟಾದ್ರೂ ಅಷ್ಟರಲ್ಲಿರಬೇಕು' ಎಂದು ಹೇಳಿ, ಒಂದು ತುತ್ತು ನುಂಗಿದರು.

ಇವರ ಮಾತುಗಳು ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಏನೂ ಮರುಮಾತನಾಡದೆ ಸುಮ್ಮನಿದ್ದೆ. ಇವರೇ ನನಗೆ ಒಂದು ವಿಚಾರವನ್ನು ನೆನಪುಮಾಡಿಕೊಟ್ಟಂತಾಯಿತು—ಚಂದುವಿನ ರೂಮಿಗೆ ನಾಳೆ ಹೋಗಬೇಕೆನ್ನುವುದನ್ನು. ಅವನು ನಮ್ಮ ಮನೆಗೆ ಬರದಿದ್ದರೂ ನನ್ನೊಡನೆ ಸರಿಯಾಗಿ ಮಾತನಾಡದಿದ್ದರೂ, ಅವನ ರೂಮಿಗೆ ನಾನೇ ಹೋಗಬೇಕೆಂದು ಮಾಡಿಕೊಂಡಿದ್ದೆ. ಅದನ್ನು ನಮ್ಮ ತಂದೆ ನೆನಪುಮಾಡಿಕೊಟ್ಟಂತಾಯಿತು; ಆದರೆ ಒಂದು ಕೊಕ್ಕೆಯನ್ನು ತಂದಿಟ್ಟರು. ಆದರೂ ಹೋಗುವುದೆಂತಲೇ ಮನಸ್ಸು ಮಾಡಿದೆ.

* * * *

ಕಾಲೇಜಿನಿಂದ ನೆಟ್ಟಗೆ ಚಂದುವಿನ ರೂಮಿಗೆ ಹೋದೆ. ಅವನೂ ಆಗ ತಾನೆ ಬಂದಿದ್ದವನು ಸುಮ್ಮನೆ ಕುರ್ಚಿಯ ಮೇಲೆ ಕುಳಿತಿದ್ದ. ನಾನು ಬಾಗಿಲು ತಟ್ಟಿದಾಗ, ಬಾಗಿಲನ್ನು ತೆರೆದೊಡನೆ ನನ್ನ ಮುಖವನ್ನು ಕಂಡು ಸರ್ರನೆ ಟೋಪಿಯನ್ನು ತೆಗೆದು ಮೇಜಿನ ಮೇಲಿಟ್ಟು, ಅಂಗಿಯನ್ನು ಕಳಚಿ ಒಂದು ಮೂಲೆಗೆಸೆದು ತನ್ನ ಹಾಸಿಗೆಯ ಮೇಲೆ ಕುಳಿತುಕೊಂಡು ಬಿಕ್ಕಿ ಬಿಕ್ಕಿ ಅಳುವುದಕ್ಕೆ ಮೊದಲುಮಾಡಿದ.

ಏನೂ ತೋಚದೆ ಸ್ವಲ್ಪ ಹೊತ್ತು ನಿಂತಿದ್ದೆ. ಆಮೇಲೆ 'ಯಾಕೆ, ಚಂದು....ನಾನು....' ಎಂದು ಪೂರೈಸುವುದರೊಳಗಾಗಿ,

'ನಿಮ್ಮ ತಂದೆಯನ್ನು....ನಮ್ಮ ತಂದೆಯೆಂದು ತಿಳಿದಿದ್ದೆ...... ಆ......ದರೆ....ನನ್ನ ತಪ್ಪು' ಎಂದು ಮತ್ತೆ ಅಳುವುದಕ್ಕೆ ಮೊದಲು ಮಾಡಿದ.

ಸುಮ್ಮನಿರುವುದು ಸರಿಯಲ್ಲವೆಂದು ಅವನ ಪಕ್ಕದಲ್ಲಿ ಕುಳಿತುಕೊಂಡೆ. 'ಯಾಕೆ ಚಂದು, ನಾನೇನಾದರು ತಪ್ಪು ಮಾಡಿದ್ದರೆ ಹೇಳು.

ಯಾಕೆ ಅಳುತ್ತಿ, ನನ್ನ ಕೂಡ ಹೇಳಬಾರದೆ? ನಾನು ಯಾರೊಡನೆಯೂ ಹೇಳುವುದಿಲ್ಲ, ಇಗೋ ನನ್ನ ಜನಿವಾರದಾಣೆ' ಎಂದು ಜನಿವಾರವನ್ನು ಹಿಡಿದುಕೊಂಡೆ.

'ಏನೂ ಇಲ್ಲ ಕಿಟ್ಟು....ಲಲಿತಂಗೆ....ಒಂದು ದಿನ....ಅವಳು ಬೇಡ, ಎಂದಳು....ಕೊಟ್ಟೆ....' ಎಂದು ಅರ್ಧೋಕ್ತಿಯಲ್ಲಿ ನಿಲ್ಲಿಸಿ ನಿಟ್ಟುಸಿರುಬಿಟ್ಟು, 'ಪಾಪ.... ಅವಳದೇನೂ ತಪ್ಪಿಲ್ಲ....ನನ್ನದೆ' ಎಂದು, ಚೌಕದಿಂದ ಕಣ್ಣುಗಳನ್ನು ಒರಸಿಕೊಂಡ.

ಇಷ್ಟರಲ್ಲಿ ನನ್ನ ದೃಷ್ಟಿ ಚಾಪೆಯ ಮೇಲಿದ್ದ ಒಂದು ಪುಸ್ತಕದ ಮೇಲೆ ಹೋಯಿತು. ಸರಿ, ಚಂದುವಿನ ಕಥೆ,--'ದೋಸೆಯ ಮೇಲಿನ ಆಸೆಯೋ?' ಎಲ್ಲವೂ ಥಟ್ಟನೆ ಮಿಂಚಿನಂತೆ ಹೊಳೆಯಿತು.

'ಆಮೇಲೆ?' ಎಂದು ಕೇಳಿದೆ.

'ಲಲಿತ ನಿಮ್ಮ ತಂದೆ ಕೂಡ—ಅದು ಹೇಳಬೇಕು, ಇದು ಹೇಳ ಬಾರದು ಎನ್ನುವ ವಿವೇಚನೆಯಿಲ್ಲ; ಪಾಪ, ಏನೂ ಅರಿಯದ ಬಾಲೆ—ಹೇಳಿ ಬಿಟ್ಟಳು. ಅವರು ನಿಮ್ಮ ತಾಯಿಯ ಎದುರಿಗೆ 'ಚಂದು, ನೀನು ಹೀಗೆ ಅಂತ ತಿಳಿದಿರಲಿಲ್ಲ' ಎಂದರು. ನನಗೆ ಕೆನ್ನೆಯ ಮೇಲೆ 'ರಪ್' ಎಂದು ಹೊಡೆದಂತಾಯಿತು. ಆದರೆ, ನನ್ನ ತಪ್ಪು. ಅವರೇನು ಮಾಡುತ್ತಾರೆ?' ಎಂದು ತಲೆಯನ್ನು ಎರಡು ಕೈಗಳಿಂದಲೂ ಹಿಡಿದು ಮಂಡಿಯ ಮೇಲೆ ಮೊಳಕೈಗಳನ್ನು ಊರಿ ಕುಳಿತನು.

'ಇಷ್ಟೇತಾನೆ, ಏನು ಮಹಾಪ್ರಮಾದ!' ಎಂದು ಸಮಾಧಾನ ಮಾಡಿದೆ. ನಿಜವಾಗಿಯೂ ಅವನ ಮೇಲೆ ಕನಿಕರವಾಯ್ತು.

'ನಿನ್ನ ಕಥೆ ಬಹಳ ಚೆನ್ನಾಗಿದೆ' ಎಂದೆ.

ಅಳುವ ಮಗುವಿಗೆ ಮಿಠಾಯಿ ಕೊಟ್ಟರೆ ಹೇಗೋ, ಹಾಗೆ, ಚಂದು ನಕ್ಕನು....ನನ್ನ ಭುಜದ ಮೇಲೆ ಅವನು ತಲೆಯನ್ನೂರಿದನು.

* * * *

ಚಂದುವಿಗೆ ನೆಲಮಂಗಲದಲ್ಲಿ ಮಿಡಲ್‌ಸ್ಕೂಲ್ ಹೆಡ್‌ಮಾಸ್ಟರ್ ಕೆಲಸ. ವರ್ಷಕ್ಕೆ ಎರಡು ಸಾರಿಯಾದರೂ ಲಲಿತನನ್ನು ನೋಡಿಕೊಂಡು ಬರುವುದಕ್ಕೆ ನಾನು ಅಲ್ಲಿಗೆ ಹೋಗುತ್ತೇನೆ. ಹೋದರೆ, ವೀಳೆಯದೆಲೆ, ಬದನೆಯಕಾಯಿ, ಹೂವು—ಇವನ್ನು ತೆಗೆದುಕೊಂಡು ಹೋಗೋದು; ಒಂದು ಐದಾರು ದಿವಸ ತಂಗಿಯ ಮನೆಯಲ್ಲಿ ಸುಖವಾಗಿರೋದು, ಬರೋದು; 'ಚಂದು ಕೈಲಿ ಲಲಿತ ಇನ್ನೂ ಜಗಳ ಆಡ್ತಾಳೆ, ನೀನೇ ಬಳ್ಳಿ ಯೋಳು' ಎಂದು ನನ್ನ ಪತ್ನೀರತ್ನಕ್ಕೆ—ಗೊತ್ತೇ ಇದೆಯಲ್ಲ...... ಕೊಡೋದು.

ಈ ಸಲವೂ ನೆಲಮಂಗಲಕ್ಕೆ ಹೋಗಿದ್ದೆ. ಆಗ ಲಲಿತನನ್ನು 'ಮೊದ ಲೆಲ್ಲ ಅಣ್ಣನ ಕೂಡ ಚಾಡಿ ಹೇಳ್ತಿದ್ದೆ. ಈಗ ಯಾರ ಸಂಗಡ ಹೇಳ್ತಿ?' ಎಂದು ಕೇಳಿದೆ. ಸೆರಗಿನ ಕೊನೆಯಿಂದ ಬಾಯಿ ಮುಚ್ಚಿಕೊಂಡು ಮುಗುಳ್ನಗೆ ಯನ್ನು ಬೀರಿದಳು..

---

# ನಂಬಿದರೆ ನಂಬಿ ಬಿಟ್ಟರೆ ಬಿಡಿ

'ನಿಮ್ಮ ಹಸ್ತರೇಖೆ ಬಹಳ ಚೆನ್ನಾಗಿದೆ, ರಾಮಣ್ಣನೋರೆ!'

'ನೀವು ಹೇಳಬೇಕು, ಚೆನ್ನಾಗಿದೆ ಅಂತ....ನನಗೇನೋ....'

'ಅದು ಯಾಕೆ ಸ್ವಾಮಿ ಹಾಗೆ ಅನ್ನುತ್ತೀರಿ. ನಿಮಗೆ ಬಿ. ಎ. ಪ್ಯಾಸಾದಾಗ ಹೇಳಿರಲಿಲ್ಲವೆ—ನೀವೇನು ಬಿ. ಎ. ಪ್ಯಾಸಿನಿಂದ ಜೀವನ ಮಾಡಬೇಕಾಗಿಲ್ಲ. ಸರಕಾರಿ ನೌಕರಿ ಸಿಕ್ಕದೆ ಹೋದರೂ ನೀವು ಅನ್ನಬಟ್ಟೆಗೆ ಯೋಚನೆಯಿಲ್ಲದೆ ನೆಮ್ಮದಿಯಾಗಿರುತ್ತೀರಿ. ಹೆಂಡತಿ ಕಡೆಯಿಂದ....ನಾನು ಹೇಳಿರುವುದು ಏನಾದರೂ ಸುಳ್ಳಾಗಿದೆಯೆ ಸ್ವಾಮಿ?'

'ನೀವು ಹೇಳೋದೇನು, ನಾನೇ ಅಂದುಕೊಂಡಿದ್ದೆ ಹಾಗಂತ. ಸರಕಾರಿ ನೌಕರಿಗೆ ಸೇರಿಕೊಂಡು ಗುಲಾಮಗಿರಿಯಲ್ಲಿರೋಕೆ ನನಗೆ ಸುತರಾಂ ಇಷ್ಟ ಇಲ್ಲ ಅಂತ ಮೊದಲಿಂದಲೂ ಅನ್ನುತ್ತಿದ್ದುದು ನಿಮಗೂ ಗೊತ್ತೇ ಇತ್ತು....'

'ಆದರೆ,....ಮರೆತಿಕಲ್ಲ....'

'ಏನೋ ಕಾಕತಾಳನ್ಯಾಯ ಸುಬ್ಬಾಜೋಯಿಸರೆ, ಕಾಕತಾಳನ್ಯಾಯ. ಒಂದು ವಿಷಯ ಹಾಗಾದರೆ ಎಲ್ಲಾ ಹಾಗಾಗುತ್ತೆಯೆ? ನಿಮ್ಮ ಹಸ್ತರೇಖೆ ಚೆನ್ನಾಗಿದೆ, ನಿಮಗೆ ದುಃಖ ಅನ್ನುವುದೇ ಇಲ್ಲ ಅಂತ ಸಾರಿಸಾರಿ ಹೇಳುತ್ತಿದ್ದರಲ್ಲ, ಹೋದ ವರುಷ, ನನ್ನ ಮಗು... ಒಂದೇ ಗಂಡುಮಗು, ವರ್ಷದ ಹಬ್ಬ ಕೂಡ ಮಾಡಿರಲಿಲ್ಲ..ನೆನಸಿಕೊಂಡರೆ ಈಗಲೂ ಕಣ್ಣೀರು ಧಡಧಡನೆ ಸುರಿಯುತ್ತೆ, ಜೋಯಿಸರೆ.'

'ದಿಟ, ಬಹಳ ಅನ್ಯಾಯವಾಯಿತು. ಅವನ್ನೆಲ್ಲಾ ನೆನಸಿಕೊಂಡು ಅತ್ತರೆ ಪ್ರಯೋಜನವಿಲ್ಲ ರಾಮಣ್ಣನೋರೆ. ಎಲ್ಲಾ ದೇವರ ಕಟ್ಟಳೆ, ಹಾಗೆ ನಡೆಯಲೇ ಬೇಕು. ದೈವೇಚ್ಛೆ ಮೀರಿ ಯಾವುದೂ ಆಗುವುದಿಲ್ಲ. ಈ ಲೋಕ ದಲ್ಲಿ ನಡೆಯುವ ಒಳ್ಳೆಯದು ಕೆಟ್ಟದ್ದು ಎಲ್ಲಾ ಆ ಮಹಾನುಭಾವನಿಗೆ ಸೇರಿದ್ದು ಅಂತ ತಿಳಿದುಕೊಂಡು ಮನಸ್ಸು ಬಿಗಿಹಿಡಿದುಕೊಳ್ಳಬೇಕು ಸ್ವಾಮಿ. ಹಾಗಂತ, ಎಲ್ಲಾ ದೈವೇಚ್ಛೆ ಅಂದುಕೊಂಡು ಸುಮ್ಮನಿರೋದೂ ದಡ್ಡತನ. ಏನೋ ಒಂದು ಅನಾಹುತ ಆಯಿತು ಅಂತ ಇಟ್ಟುಕೊಳ್ಳೋಣ. ದೈವೇಚ್ಛೆ, ಹಾಗಾಯಿತು ಅನ್ನುವುದೂ ಶುದ್ಧ ತಪ್ಪು. ಆ ಅನಾಹುತವನ್ನು ಮನುಷ್ಯ ಪ್ರಯತ್ನದಿಂದ ನಿವಾರಿಸಲು ಸಾಧ್ಯ. ಆದರೆ ನಮ್ಮಂಥ ವೈದಿಕ ಗೊಡ್ಡುಗಳ ಮಾತು ಯಾರು ಕೇಳುತಾರೆ ಸ್ವಾಮಿ.'

'ಹಿಂಗೆಲ್ಲ ಅನ್ನಬಾರದು ಜೋಯಿಸರೆ. ನೀವು ಹೇಳೋದೇನು, ನಾಗರಪ್ರತಿಷ್ಠೆ ತಾನೇ. ಅದಕ್ಕೇನು ಆಗಬಹುದು; ಅದೇನು ದೊಡ್ಡ ವಿಷಯ'

'ನಾಗರಪ್ರತಿಷ್ಠೆಯೋ, ಏನೋ ಮಾಡಿಸೋಣ, ಅದಕ್ಕೇನು ಮುಟ್ಟಿ ಸಬೇಕು..ನಿಧಾನವಾಗಿ ಜಾತಕ ನೋಡಿ ಹೇಳ್ತೀನೆ. ನಾನು ಹೇಳುವುದೆಲ್ಲ ಸುಳ್ಳು, ಶಾಸ್ತ್ರವೇ ಸುಳ್ಳು ಅಂತ ಅಲ್ಲವೇ ನೀವು ಹೇಳೋದು. ಒಂದು ನಡೆದ ಸಂಗತಿ ಹೇಳ್ತೀನೆ. ನೀವು ನಂಬಿದರೆ ನಂಬಿ ಬಿಟ್ಟರೆ ಬಿಡಿ.. ಏನು, ಎಂಟು ಹೊಡೆಯಿತೊ? ಹೊತ್ತಾಯಿತೇನೋ?'

'ಪರವಾಯಿಲ್ಲ, ಅದೇನು ಹೇಳಿ, ನನಗಿರೋ ಕೆಲಸ ಅಷ್ಟರಲ್ಲೇ ಇದೆ.'

'ಕಂಟ್ರೋಲರ್ ಆಫೀಸ್ ರಾಮಚಂದ್ರರಾಯರು....'

ಸ್ವಲ್ಪ ತಲೆ ಕೆರೆದೆ.

'ಮಲ್ಲೇಶ್ವರದಲ್ಲಿದ್ದರೂ ಸ್ವಾಮಿ. ಕರ್ಣಾಟಕರು, ನಿಮ್ಮ ಜನ; ನಿಮಗೆ ಗೊತ್ತಿರಬೇಕು.'

ಮತ್ತೆ ತಲೆ ಕೆರೆದೆ. ಯಾರೋ ಗೊತ್ತಾಗಲಿಲ್ಲ. 'ಅದೇ ಹೆಸರಿನವರು ನೂರಾರು ಜನ ಇದ್ದಾರೆ' ಎಂದೆ.

'ಹೋಗಲಿ ಬಿಡಿ, ನಿಮಗೆ ಗೊತ್ತಿಲ್ಲ ಅಂತ ಕಾಣುತ್ತೆ. ಹೋದ ವರುಷ ಅವರ ಮನೆಗೆ ಹೋಗಿದ್ದೆ. ಭಾನುವಾರ, ಮನೆಯಲ್ಲೇ ಇದ್ದರು.

ನಾನು ಹೋದಾಗ ಊಟಮಾಡಿ ಮಲಗಿದ್ದು ಆಗ ತಾನೆ ಎದ್ದಿದ್ದರು ಅಂತ ಕಾಣುತ್ತೆ, ಬರೀ ಬನೀನು ಹಾಕಿಕೊಂಡು, ಹೆಗಲ ಮೇಲೆ ಒಂದು ಟವಲ್ ಹಾಕಿಕೊಂಡು, ಚಾಪೆಯ ಮೇಲೆ ಹಾಸಿಗೆಗೆ ಒರಗಿಕೊಂಡು ಆಕಳಿಸುತ್ತಾ ಕುಳಿತಿದ್ದರು. ನಾನು ಹೋದೆ. ಮೇಲಕ್ಕೆದ್ದು ನನ್ನ ಕರೆದುಕೊಂಡು ಹೋಗಿ ಚಾಪೆಯ ಮೇಲೆ ಕುಳಿತುಕೊಳ್ಳುವ ಹಾಗೆ ಹೇಳಿದರು. ಕುಳಿತುಕೊಂಡೆ. ಸ್ವಲ್ಪಹೊತ್ತು ಏನೇನನ್ನೋ ಮಾತನಾಡುತ್ತಾ ಇದ್ದೆವು. ಒಳಗಿನಿಂದ ಅವರ ಹೆಂಡತಿ ಕಾಫಿ ತಂದಿಟ್ಟರು. ಮಾತನಾಡುತ್ತಲೇ ಇದ್ದೆವು—ನಮ್ಮೂರಿನ ವಿಚಾರ, ಅವರ ಪೂರ್ವಿಕರ ವಿಚಾರ, ಇನ್ನೂ ಏನೇನೊ. ಎರಡು ಲೋಟ ಕಾಫಿ ನನ್ನ ಕಣ್ಣಿಗೆ ಬಿದ್ದಿರಲಿಲ್ಲ, ನೋಡಿದಾಗ. 'ಇದೇನು?' ಎಂದು ಕೇಳಿದೆ. 'ಆರಿಹೋಗುತ್ತೆ ತಗೋಬೇಕು, ಕಾಫಿಗೇನು ದೋಷ, ಹೇಳಿ' ಎಂದರು. 'ಇಲ್ಲ, ಇಲ್ಲ, ಕ್ಷಮಿಸಿ' ಎಂದೆ. ಅವರು ಕುಡಿಯೋದು ಕುಡಿದರು. ಅವರ ಹೆಂಡತಿ ಬಂದು ಲೋಟ, ನಾನು ಕುಡಿಯದೇ ಇದ್ದ ಕಾಫಿ ಎಲ್ಲ ತೆಗೆದುಕೊಂಡು ಹೋಗಿ ತಾಂಬೂಲ ತಂದಿಟ್ಟರು. ಎಲೆ ಹಾಕಿಕೊಳ್ಳಲು ಮೊದಲುಮಾಡಿದೆ. ಅವರೂ ಬಾಯಲ್ಲಿ ಅಡಿಕೆ ಹಾಕಿಕೊಂಡರು. ಅಷ್ಟು ಹೊತ್ತಿಗೆ ಹೊರಗಿನಿಂದ ಒಬ್ಬ ಹುಡುಗ—ಆರೇಳು ವರ್ಷವಿರಬಹುದು—ಅವರ ಮಗ ಎಂದುಕೊಂಡೆ—ಮೈಕೈ ತುಂಬಿಕೊಂಡು ಒಳ್ಳೆ ಲಕ್ಷಣವಾಗಿದ್ದ ಹುಡುಗ—ದಡದಡ ಅಂತ ಓಡಿಬಂದು ಅಪ್ಪನ ತೊಡೆಯೇರಿ—'ಎಲೆ ನಾ ಮಡಿಸಿಕೊಡತೀನಿ' ಎಂದು ಕತ್ತಲ್ಲಾಡಿಸುತ್ತ ತೊಡೆಯ ಮೇಲೆ ಜಗ್ಗು ಹಾಕುತ್ತ ಕುಳಿತ.

ನಾನು—'ಬಾರದಪ್ಪ, ಕೈ ಸುಣ್ಣ ಆಗುತ್ತೆ' ಎಂದು ಹೇಳಿ, ರಾಮಚಂದ್ರರಾಯರ ಕಡೆ ತಿರುಗಿ—'ಏನು ನಿಮ್ಮ ಮಗನೋ?' ಎಂದೆ. 'ಏನೋ ಕಾಣದ ಹಾಗೆ ಕೇಳುತೀರಲ್ಲ! ನಿಮ್ಮೂರಿನಲ್ಲಿ ಅಲ್ಲವೆ ಹುಟ್ಟಿದ್ದು.' ಎಂದರು. 'ನೋಡಿದಿರಾ, ಮರೆತಿದ್ದೆ. ನಮ್ಮಣ್ಣಂದಿರ ಜೊತೆಯಲ್ಲಿ ನಾಮಕರಣಕ್ಕೂ ಬಂದಿದ್ದೆ. ಹೆಸರು. . ವೆಂಕಟ—ವೆಂಕಟರಾಮು ಅಲ್ಲವೆ? ಎಷ್ಟೋ ವರ್ಷವಾಯಿತು. ಎಲ್ಲಪ್ಪ ಕೈಕೊಡು, ನಿನ್ನ ಪುಟ್ಟ ಬೆಳ್ಳಿ ಕೈಕೊಡು, ನೋಡ್ತೇನೆ' ಎಂದು ಹುಡುಗನ ಕಡೆ ನೋಡಿದೆ. ಕೇಳಿದ ಕೂಡಲೆ ಹುಡುಗ ಕೈನೀಡಿದ. ಒಳ್ಳೆಯ ಹುಡುಗ ಎಂದುಕೊಂಡೆ. ಕಿಟಕಿಯ ಬೆಳಕು ಚಾಪೆಯ ಮೇಲೆ

ಬೀಳುತ್ತಿತ್ತು. ಆ ಬೆಳಕಿನಲ್ಲಿ ಅಂಗೈ ಹಿಡಿದು ನೋಡಿದೆ—ಒಳ್ಳೆ ಮುದ್ದಾದ ಕೈ. ಎಳೆಯದಾಗಿ, ಕೆಂಪಗೆ ಅರಳಿ ಚಿಗುರಿನ ಹಾಗೆ. ಇನ್ನೂ ಅಂಗೈರೇಖೆ ಗಳು ಅಷ್ಟು ಸ್ಫುಟವಾಗಿ ಕಾಣುತ್ತಿರಲಿಲ್ಲ. ಆದರೂ ಮುಖ್ಯಲಕ್ಷಣ ತಿಳಿಯು ವುದಕ್ಕೆ ಕೆಲವು ರೇಖೆಗಳು ಗೊತ್ತಾದರೆ ಸಾಕು. ಹಾಗೇ ನೋಡುತಾ ಇದ್ದೆ. 'ಒಳ್ಳೆ ಪದವಿಗೆ ಬರುತ್ತಾನೆ. ಹಸ್ತ ಚೆನ್ನಾಗಿದೆ. ಆದರೆ ಎರಡು ಲಗ್ನ. ಅಲ್ಲದೆ..' ಎಂದು ಅಷ್ಟಕ್ಕೇ ನಿಲ್ಲಿಸಿದೆ.

'ಯಾಕೆ..ಮುಚ್ಚುಮರೆ?' ಎಂದು ಕೇಳಿದರು.

'ನೀವು ನಂಬುತ್ತೀರಾ?' ಎಂದು ಕೇಳಿದೆ.

'ನಂಬೋದು ಗಿಂಬೋದು ಬೇರೆ ವಿಷಯ. ನಾನು ನಂಬಲಿ ಬಿಡಲಿ ಆಗೋದು ಆಗಲೇಬೇಕಲ್ಲ. ನೀವು ಹೇಳೋದನ್ನ ಹೇಳಿ' ಎಂದು ಖಂಡಿತ ವಾಗಿ ನುಡಿದರು.

'ಮಗೂ, ತಾಂಬೂಲದ ತಟ್ಟೆ ಒಳಗಿಟ್ಟು ಒಂದು ಲೋಟ ನೀರು ತೆಗೆದುಕೊಂಡು ಬಾಪ್ಪಾ' ಎಂದು ಹುಡುಗನನ್ನು ಕಳಿಸಿ, ಹೇಳಿದೆ.

'ನಿಮ್ಮ ಹುಡುಗನಿಗೆ ಎರಡು ಕಂಕಣಪ್ರಾಪ್ತಿ. ಆದರೂ ಎಂಟನೇ ವರ್ಷದಲ್ಲಿ ವಿಪರೀತ ಕಂಟಕ—ಪ್ರಾಣಭಯ..ಮೃತ್ಯುಂಜಯ ಜಪ ಮಾಡಿ ಸಿದರೆ ಒಳ್ಳೆಯದು.'

ರಾಮಚಂದ್ರರಾಯರು ದೊಡ್ಡವರು, ಜರಿಯಪೇಟದವರು; ನಮ್ಮ ಹಾಗೆ ಹರಕು ಪಂಚೆ, ತಾಮ್ರದ ಪಂಚಪಾತ್ರೆಯವರಲ್ಲ; ಅವರ ನಶ್ಯದ ಡಬ್ಬಿ ಸಹ ಬೆಳ್ಳಿಯದು. ಸಾಲದ್ದಕ್ಕೆ, ಕ್ರಾಪು ಮಾಡಿಸಿಕೊಂಡು ಬನೀನು ಹಾಕಿ ಕೊಂಡು ಊಟ ಮಾಡತಾರಲ್ಲ, ಆ ಜಾತಿಗೆ ಸೇರಿದವರು. ಅವರು ನಮ್ಮೂರಿ ನಲ್ಲೇ ಹುಟ್ಟಿ ನಮ್ಮ ಕಣ್ಣಮುಂದೆ ಬೆಳೆದವರು. ಏನೋ ಹಳೇ ಪರಿಚಯ, ವಾತ್ಸಲ್ಯ—ಬೆಂಗಳೂರಿನಲ್ಲಿ ಅವರ ಮನೆ ಹುಡುಕಿಕೊಂಡು ಹೋದೆ. ತಂದೆಗೆ ತಕ್ಕ ಮಗ ಅಂದುಕೊಂಡಿದ್ದೆ. ಹೋದ ಕೂಡಲೆ ಆದರದಿಂದಲೇ ಕಂಡುಕೊಂಡರು. ಆದರೆ ನಾನು ಅವರ ಸ್ವಭಾವ ರೀತಿ ಒಂದೂ ತಿಳಿದು ಕೊಳ್ಳದೆ ಎಲ್ಲರ ಕೈಲೂ ಹೇಳುವ ಹಾಗೆ ಏನೇನೋ ಹೇಳಿಬಿಟ್ಟೆ. ಮುಖ್ಯ ನನ್ನದು ಹುಚ್ಚುತನ. 'ಜಪಮಾಡಿಸಿದರೆ ಒಳ್ಳೆಯದು' ಅಂತ ಅಂದೆನೋ ಇಲ್ಲವೋ, ಸ್ವಲ್ಪ ಹುಸಿನಗೆ ನಕ್ಕು—

'ಇನ್ನೂ ಎಷ್ಟು ದಿನ ಇರುತೀರಿ ಇಲ್ಲಿ?' ಎಂದು ಕೇಳಿದರು. ಅವರ ಹುಸಿನಗೆಯ ಅರ್ಥ ಆಗ ನನಗೆ ಹೊಳೆಯಲಿಲ್ಲ. ಜಪಗಿಪ ಮಾಡಿಸಿಯಾರೇನೊ ಅಂದುಕೊಂಡು—'ನಾಳೆ ನಾಡಿದ್ದರಲ್ಲೇ ಹೋಗಬೇಕೂ ಅಂತಿದೀನಿ. ಒಂದು ವೇಳೆ ತಾವೇನಾದರೂ..' ಎಂದು ಹೇಳುವಷ್ಟರಲ್ಲೇ ನಡುವೆಯೆ ಬಾಯಿ ಹಾಕಿ 'ಏನೂ ಇಲ್ಲ. ನಿಮಗೆ ಯಾಕೆ ತೊಂದರೆ. ಮುಖ್ಯ ತಮ್ಮ ವಿಶ್ವಾಸ ಇರಬೇಕು. ಎಲ್ಲಕ್ಕಿಂತ ತಮ್ಮ ಆಶೀರ್ವಾದದೊಡ್ಡದು ನೋಡಿ. ಅಪ್ಪಣೆಯಾದರೆ ನಾನು ಹೋಗುತೀನಿ. ಹೊರಗೆ ಸ್ವಲ್ಪ ಕೆಲಸ ಇದೆ' ಎಂದು ಹೊರಡಲೆದ್ದರು.

ಅವರ ನಗೆಯ ಅರ್ಥ ಹೊಳೆಯಿತು.

'ಅಯ್ಯೋ ಅಯ್ಯೋ, ತಮಗೆ ಯಾಕೆ ಅಷ್ಟು ತೊಂದರೆ. ನಿಮಗೆ ಈಗಾಗಲೇ ಬೇಕಾದಷ್ಟು ತೊಂದರೆ ಕೊಟ್ಟಿದೇನೆ. ಅಪ್ಪಣೆಯಾದರೆ ಹೋಗ ತೀನಿ—ನಾನೇ' ಎಂದು ಒಂದು ನಿಮಿಷವೂ ನಿಲ್ಲದೆ ಹೊರಟು ಬಂದೆ.

ಮತ್ತೆ ಎಂಟು ಹತ್ತು ತಿಂಗಳ ಮೇಲೆ ಯಾವುದೋ ಕೆಲಸದ ಮೇಲೆ ಬೆಂಗಳೂರಿಗೆ ಹೋಗಿ ಅಲ್ಲೇ ಒಂದು ಐದಾರು ದಿನ ಇದ್ದೆ. ಆಗ, ನಾನು ಹಿಂದೆ ರಾಮಚಂದ್ರರಾಯರೊಡನೆ ನುಡಿದದ್ದು ಸತ್ಯವಾಯಿತು.

'ಅವರ ಹುಡುಗ ಹೋಗಿಬಿಟ್ಟನೋ?' ಎಂದು ಕುತೂಹಲದಿಂದ ಕೇಳಿದೆ.

'ಇಲ್ಲ, ಇಲ್ಲ. ದೇವರ ದಯದಿಂದ ಹುಡುಗ ಗಟ್ಟಿಮುಟ್ಟಾಗಿದ್ದಾನೆ.'

'ಹಾಗಾದರೆ?'

'ಹೇಳುತೇನೆ ಕೇಳಿ' ಎಂದು ತಮ್ಮ ಕಥೆ ಮುಂದುವರಿಸಿದರು:—

'ಆ ದಿನ ಬಹಳ ಹೊತ್ತಾಗಿ ಹೋಗಿದೆ ಆಫೀಸಿಗೆ. ಅವತ್ತು ಅವರದೇ ಅಡಿಗೆ. ಅವರ ಕುಟುಂಬ ಹೊರಗಾಗಿದ್ದರು. ಹೇಗೆ ಹೇಗೋ ಬೇಯಿಸಿ ಹೆಂಡತಿಗೂ ಮಗನಿಗೂ ಬಡಿಸಿ, ಮಗನಿಗೆ ತಾಯಿಯೊಡನೆ ಮನೆಯಲ್ಲೇ ಇರುವುದಾಗಿ ಹೇಳಿ, ಬಿಸಿಲಿನಲ್ಲಿ ಸರಸರ ಅಂತ ಆಫೀಸಿಗೆ ಹೋದರಂತೆ. ಬಹಳ ಆಯಾಸವಾಗಿತ್ತೇನೋ, ಮೇಜಿನ ಮುಂದೆ ಸುಮ್ಮನೆ ಕುಳಿತಿದ ರಂತೆ. ಎಷ್ಟು ಹೊತ್ತು ಹಾಗೇ ಕುಳಿತಿರುವುದಕ್ಕಾಗುತ್ತೆ, ತಲೆಗೆ ಕಟ್ಟಿದ ಕೆಲಸ ಹೇಗಾದರೂ ಮಾಡಲೇಬೇಕಲ್ಲ. ಕೆಲಸಕ್ಕೆ ಮೊದಲುಮಾಡಿದರು. ಎಂದೂ ಇಲ್ಲದ್ದು ಅವೊತ್ತೇ ಯಾವ ಯಾವುದೋ ಅರ್ಜೆಂಟ್ ಕಾಗದಗಳು

ಬಂದು ಬಿದ್ದಿವೆಯಂತೆ. ಸರಿಯಾಗಿ ಕೆಲಸ ಮಾಡಬೇಕೆಂದು ಎಷ್ಟು ಮನಸ್ಸು ಮಾಡಿದರೂ ಬರೆಯುವ ಕಡ್ಡಿ ಮುಂದಕ್ಕೆ ಓಡದು. ಮನಸ್ಸಿಗೆ ಏನೋ ಒಂದು ವಿಧವಾದ ಬೇಸರ, ಉಲ್ಲಾಸವೇ ಇಲ್ಲ; ಹೃದಯದಲ್ಲಿ ಏನೋ ಕಳ ವಳ. ಹಾಗೂ ಹೀಗೂ ಎರಡು ಗಂಟೆ ಹತ್ತಿರವಾಯಿತು. ಇದ್ದಕಿದ್ದ ಹಾಗೆ ಯಾವುದೋ ಹುಡುಗ ಒಳಕ್ಕೆ ಬಂದು—ಓಡಿ ಬಂದಿದ್ದ ಅಂತ ಕಾಣುತ್ತೆ— 'ರಾಮಚಂದ್ರರಾಯರೆ, ರಾಮಚಂದ್ರರಾಯರೆ' ಅಂತ ಏದುಸಿರಿನಲ್ಲಿ ಕೂಗಿದ. ರಾಮಚಂದ್ರರಾಯರು ಕತ್ತೆತ್ತಿ ನೋಡಿದರು; ಪಕ್ಕದ ಮನೆಯ ಹುಡುಗ ಕಿಟ್ಟು.

'ಇದೇನು ಕಿಟ್ಟು ಒಂದೇ ಉಸಿರಿನಲ್ಲಿ ಓಡಿ ಬಂದೆ, ಸ್ಕೂಲಿಲ್ಲವೇನೋ?' ಎಂದು ಕೇಳಿದರಂತೆ.

'ಸ್ಕೂಲಿಗೆ ಹೋಗಿದ್ದೆ. ಬೆಳಗ್ಗೆ ವೆಂಕಟರಾಮು ಯಾಕೋ ಸ್ಕೂಲಿಗೆ ಬರಲಿಲ್ಲ. ನೋಡಿಕೊಂಡು ಬರೋಣ ಅಂತ ನಿಮ್ಮ ಮನೆಗೆ ಹೋದೆ. ಅವನು ಹಾಸಿಗೆ ಮೇಲೆ ಮಲಗಿದ್ದ ಜ್ವರ ಅಂತ. ಗೌರಮ್ಮನೋರು ನಿಮ್ಮ ಮ್ಮನ್ನ ಕೂಗು ಅಂತ ನನಗೆ ಹೇಳಿದರು. ನಮ್ಮಮ್ಮನ್ನ ಕೂಗಿದೆ. ಅವರು ಬಂದು ಅವನನ್ನ ನೋಡಿದರು. ಮೈಕೈನೆಲ್ಲ ಮುಟ್ಟಿ ನೋಡುತಾ ಇದ್ದಾಗ 'ಅಯ್ಯೋ' ಅಂತ ಕಿರಿಚಿಕೊಂಡ. ಏನು ಅಂತ ಕೇಳಿದ್ದಕ್ಕೆ ನೋಯುತ್ತೆ ಅಂತಂದು ಕಂಕುಳ ಮುಟ್ಟಿ ತೋರಿಸಿದ. ನಮ್ಮಮ್ಮ ಚೆನ್ನಾಗಿ ನೋಡಿ 'ಪ್ಲೇಗ್‌ಗಡ್ಡೆ ಹಾಗೆ ಕಾಣುತ್ತೆ ಅಂದ್ರು. ಆಫೀಸಿಗೆ ಹೇಳಿ ಕಳಿಸಿ' ಎಂದು ಗೌರಮ್ಮನವರ ಕಿವಿಯಲ್ಲಿ ಪಿಸುಗುಟ್ಟಿದರು. ಗೌರಮ್ಮನವರು ನನ್ನ ಕೂಡ 'ತಿಂಡಿಗೆ ಕಾಸು ಕೊಡುತೀನಿ. ನಿಮ್ಮ ತಂದೆ ಆಫೀಸಿದೆಯಲ್ಲ, ಅಲ್ಲಿಗೆ ಹೋಗಿ ಅವರ ಕೈಲಿ ವೆಂಕಟ್ರಾಮುಗೆ ತುಂಬ ಜ್ವರ, ಏನು ಕೆಲಸ ಇದ್ದರೂ ಬಿಟ್ಟುಬರಬೇಕು ಅಂತ ಹೇಳು' ಅಂದರು. ನಾನೂ ಬೇಗಬೇಗ ಓಡಿಓಡಿ ಬಂದೆ. ನಾನು ಸ್ಕೂಲಿಗೆ ಹೋಗ್ತೀನಿ' ಎಂದು ಅವನ ಪಾಡಿಗೆ ಅವನು ಓಡಿದನಂತೆ.

'ರಾಮಚಂದ್ರರಾಯರು ಮೇಜಿನ ಮೇಲೆ ಇದ್ದದ್ದನ್ನ ಇದ್ದಹಾಗೇ ಬಿಟ್ಟು ಮನೆಯ ಕಡೆಗೆ ಓಡಿದರು. ಇದ್ದಕ್ಕಿದ್ದ ಹಾಗೆ ಅಡ್ಡಮಳೆ ಬಂದರೆ ಯಾವುದಾದರೂ ಸೂರುಕೆಳಗಿನ ಜಗುಲಿ ಸೇರೋಣವೆಂದು ಓಡುತ್ತೇವೆ

ಯಲ್ಲ ಹಾಗೆ ಓಡಿದರಂತೆ. ಮುಕ್ಕಾಲು ದಾರಿ ಓಡಿದ್ದಾರೆ, ಮಲ್ಲೇಶ್ವರದ ತಿಟ್ಟು ಹತ್ತಬೇಕು, ಅಷ್ಟರಲ್ಲಿ ಕಲ್ಲೆಡವಿ ಮುಗ್ಗರಿಸಿ ಮುಂದಕ್ಕೆ ಬಿದ್ದರಂತೆ. ಬಿದ್ದವರು ಬಿದ್ದೇ ಬಿದ್ದರು. ಮತ್ತೆ ಮೇಲಕ್ಕೆ ಏಳಲೇ ಇಲ್ಲ.'

'ಏಳಲೇ ಇಲ್ಲ?'

'ಅಲ್ಲೇ ಹರಹರಾ ಎಂದರು.'

'ಎಲ್ಲೋ ಎಂದೋ ಪೇಪರಿನಲ್ಲಿ ಓದಿದ ಹಾಗಿತ್ತು. ಅಂತೂ ಬಹಳ ವಿಚಿತ್ರವಾಗಿದೆ ಸಾವು!' ಎಂದು ನಿಟ್ಟುಸಿರು ಬಿಟ್ಟು ಸುಮ್ಮನಾದೆ.

'ನೋಡಿದಿರಾ ರಾಮಣ್ಣನೋರೆ. ಜ್ಯೋತಿಷ್ಯ ಸುಳ್ಳಾಗೋಣ ಅಂದರೇನು? ಅವರು ನನ್ನ ಮಾತು ನಂಬಲಿಲ್ಲ, ಆ ಹುಡುಗನ ಕೈ ನೋಡಿದಾಗ....'

ನಾನು ಅರ್ಧದಲ್ಲಿ ಮಾತೆತ್ತಿದೆ. 'ಹುಡುಗನಿಗೆ ಎಂಟನೇ ವರ್ಷದಲ್ಲಿ ಕಂಟಕ. ಅವನಿಗೆ ಕಂಟಕ ಒದಗಲೇ ಇಲ್ಲ. ನಿಮ್ಮ ಮಾತು ಸುಳ್ಳಾಯಿತಲ್ಲ?'

ಸುಬ್ಬಾಜೋಯಿಸರು 'ನಾನು ಹೇಳುವುದನ್ನು ಪೂರ್ತ ಕೇಳಿ. ಆಮೇಲೆ, ನಾನು ಹೇಳುವುದನ್ನು ನಂಬಿದರೆ ನಂಬಿ, ಬಿಟ್ಟರೆ ಬಿಡಿ. ಆ ಹುಡುಗನಿಗೆ ಪ್ರಾಣಸಂಕಟವೇನೋ ಇತ್ತು. ಆದರೆ ಎರಡು ಕಂಕಣ ಪ್ರಾಪ್ತಿಯೂ ಇದೆ. ಆದ್ದರಿಂದ ಅವನ ಎಂಟನೇ ವರ್ಷದಲ್ಲಿ ಅದೇ ಕಂಟಕ ಮನೆಯವರಿಗೆ ಇನ್ನು ಯಾರಿಗಾದರೂ ತಗುಲಲೇಬೇಕು. ಇದನ್ನೆಲ್ಲಾ ಯೋಚಿಸಿಯೇ ಮೃತ್ಯುಂಜಯ ಜಪ ಮಾಡಿಸಿ ಅಂತ ಅವರಿಗೆ ಹೇಳಿದ್ದು. ನಾನು ಇಷ್ಟೆಲ್ಲ ಬಿಡಿಸಿ ಹೇಳದೆ—ಹೇಗೆ ಸ್ವಾಮಿ ಇಷ್ಟೆಲ್ಲ ಬಿಡಿಸಿ ಹೇಳುವುದು?– ಸುಮ್ಮನೆ ಸೂಚನೆ ಕೊಟ್ಟೆ. ಆದರೆ ಅದನ್ನವರು ಉದಾಸೀನ ಮಾಡಿದರು. ಮೃತ್ಯು ಅವರನ್ನೇ ನುಂಗಿತು. ಅವನೇನೋ ಸಾಯೋನು ಸುಖವಾಗಿ ಸತ್ತ. ಆದರೆ ಹೆಂಡತಿ ಮಕ್ಕಳ ಪಾಡು ನೋಡಿ' ಎಂದು ಮರುಕಗೊಂಡು ಹೇಳಿದರು. ನನಗೂ ಬಲು ಸಂಕಟವಾಯಿತು.

ಜೋಯಿಸರು ಮತ್ತೆ ಮುಂದುವರಿಸಿದರು.

'ನಾನು ಜೋಯಿಸರ ಮನೆತನದವನು. ಜ್ಯೋತಿಶ್ಶಾಸ್ತ್ರದಲ್ಲಿ ಯಥಾ ಶಕ್ತಿ ತಿಳಿವಳಿಕೆ ಸಂಪಾದಿಸಿಕೊಂಡಿದ್ದರೂ ನಾನು ಅದರಿಂದ ಜೀವನ ಮಾಡ ಬೇಕಾಗಿಲ್ಲ. ನೀವು ಕಂಡ ಹಾಗೇ ಯಾರ ಹತ್ತಿರವೂ ಒಂದು ಕಾಸನ್ನು

ನಾನಾಗಿ ಕೇಳಿದವನಲ್ಲ. ಏನೋ ಹೊಟ್ಟೆ-ಬಟ್ಟೆ ನೋಡಿಕೊಂಡು ನಮ್ಮಂದಿ ಯಾಗಿರುವದಕ್ಕೆ ಒಂದು ಅಂಗೈ ಅಗಲ ಭೂಮಿ ಕೊಟ್ಟಿದ್ದಾನೆ ದೇವರು. ಏನೋ ನಮ್ಮವರು ತಮ್ಮವರು ಅಂತ ಬೇಕಾದವರ ಕೈ ನೋಡಿ, ಜಾತಕ ನೋಡಿ ಫಲಾಫಲ ಹೇಳಿ, ಏನಾದರೂ ತೊಂದರೆಯಿದ್ದು ಅದಕ್ಕೇನಾದರೂ ನಿವಾರಣೋಪಾಯ ಇದ್ದರೆ ಹೇಳಿ, ಏನೋ ಕೈಲಾದಷ್ಟು ಈ ಮೂಲಕ ಲೋಕಸೇವೆ ಮಾಡೋಣ ಅಂತ ನನ್ನ ಉದ್ದೇಶ. ಆದರೆ ನಂಬಿಕೆಯಿಲ್ಲ ಸ್ವಾಮಿ, ಈಗಿನ ಕಾಲದವರಿಗೆ ನಂಬಿಕೆಯಿಲ್ಲ, ಯಾವುದರಲ್ಲೂ ನಂಬಿಕೆಯಿಲ್ಲ. ಅದರಲ್ಲೂ ನಮ್ಮವರು ಎಂದರೆ ಕಸಕ್ಕಿಂತಲೂ ಕಡೆ. ಪರದೇಶದಿಂದ ಯಾವ ನಾದರೂ ಫಿರಂಗಿಯವನು ಬಂದು ದುಡ್ಡು ಕಸಿದುಕೊಂಡು ಕೈನೋಡಿಯೋ ಮುಖ ನೋಡಿಯೋ ಒಂದಿಷ್ಟು ಸುಳ್ಳು ಬಗುಳಿದರೆ ಅವನದು ಸತ್ಯ, ವೇದ ವಾಕ್ಯ. ನಾವು ಪುಗಸಟ್ಟೆ ಹೇಳಿದರೂ ನಮ್ಮ ಮಾತಿಗೆ ಬೆಲೆಯಿಲ್ಲ. ಲೋಕವೇ ತಲೆಕೆಳಗಾಗುವ ಕಾಲ ಇದು, ಯಾರೇನು ಮಾಡುತಾರೆ.' ಎಂದು ಅಲ್ಲಿಗೇ ನಿಲ್ಲಿಸಿದರು. ಅವರು ಇಷ್ಟೆಲ್ಲಾ ಹೇಳುವ ವರೆಗೂ ನಶ್ಯ ತೀಡುತಾ ಇದ್ದೆ. ಅವರು ಮಾತು ನಿಲ್ಲಿಸುವ ಹೊತ್ತಿಗೆ ಒಂದೆರಡು ಚಿಟಿಕೆ ಮಾಡಿದೆ. ಅವರಿಗೆ ಒಂದು ಚಿಟಿಕೆ ಕೊಟ್ಟೆ. ನಶ್ಯ ಹಾಕಿಕೊಳ್ಳುತ್ತ 'ನಾ ಬರಲೇ ?' ಎಂದು ಮೇಲಕ್ಕೆದ್ದರು.

'ನೀವು ಹೇಳಿದ್ದೆಲ್ಲಾ ಕೇಳಿದ ಮೇಲೆ ನಂಬದೆ ಇರೋದಕ್ಕೂ ಆಗು ವುದಿಲ್ಲ. ಹಾಗಂತ ಸದಾ ನಂಬೋಕೂ ಆಗುವುದಿಲ್ಲ. ವಿಚಿತ್ರ ನೋಡಿ. ಒಳ್ಳೇದು. ನಾಳೆ ಜಾತಕ ಹುಡುಕಿ ಇಟ್ಟಿರುತೀನಿ. ನಾನೇ ನಿಮ್ಮ ಮನೆಗೆ ಬರಲೋ ಹೇಗೆ?' ಎಂದು ಕೇಳಿದೆ.

'ಯಾಕೆ, ನಾನೇ ಇತ್ತಕಡೆ ಬರಬೇಕಾಗಿದೆ, ಹಾಗೇ ಬರುತೀನಿ. ನಾನು ಊದುವ ಶಂಖ ಊದಿಬಿಡುತೀನಿ; ನೀವು ನಂಬಿದರೆ ನಂಬಿ, ಬಿಟ್ಟರೆ ಬಿಡಿ. ಯಾವುದಕ್ಕೇ ಆಗಲಿ, ನಂಬಿಕೆ ಇರಬೇಕು ಸ್ವಾಮಿ' ಎಂದು ಎರಡು ಸಲ ನೀನಿದರು!

'ಸತ್ಯ ಜೋಯಿಸರೆ' ಎಂದು ನಾನೂ ನಶ್ಯ ಏರಿಸಿದೆ. ಸೀನು ಬರುವ ಹಾಗಾಯಿತು. ಆದರೆ ಬರಲಿಲ್ಲ!

ಆದ್ದರಿಂದ ನೀವು ನಂಬಿದರೆ ನಂಬಿ, ಬಿಟ್ಟರೆ ಬಿಡಿ. ನಾನೇನೋ..

---

# ಬಗೆದಂತೆ ಬಾಳು

ಪರೀಕ್ಷೆ ಮುಗಿಯಿತು. ನಮ್ಮೂರಿಗೆ ಹೊರಟೆ. ನಮ್ಮೂರು ಹೊಸೂರು. ಹೊಸೂರು ಅಂತ ಅದರ ಹೆಸರು ಅಷ್ಟೆ; ಅದು ಊರೇ ಅಲ್ಲ, ಹೊಸದು ಮೊದಲೇ ಅಲ್ಲ. ಎಲ್ಲರಿಗೂ ಗೊತ್ತಿಲ್ಲದಿರುವ ಅನೇಕ ಹಳ್ಳಿಗಳಲ್ಲಿ ಒಂದು. ಆದರೆ ಹಳ್ಳಿಗೆ ಹಳ್ಳಿಯೂ ಅಲ್ಲ, ಈಚೆಗೆ ಒಂದು ಇನ್‌ಕಂಪ್ಲೀಟ್ ಮಿಡಲ್‌ಸ್ಕೂಲ್ ಸ್ಥಾಪಿತವಾಯಿತು, ಊರಿನವರೆಲ್ಲಾ ಸರಕಾರಕ್ಕೆ ಅರ್ಜಿ ಹಾಕಿಕೊಂಡ ಮೇಲೆ. ಹೆಸರಿಗೊಂದು ಸಣ್ಣ ಪೋಲಿಸ್‌ಸ್ಟೇಷನ್ ಬೇರೆ ಇದೆ. ಒಂದು ಅಂಚೆಕಛೇರಿಯೂ ಇದೆ. ಆದರೆ ನಮ್ಮೂರಿಗೆ ರೈಲೂ ಇಲ್ಲ, ಬಸ್ಸೂ ಇಲ್ಲ.

ಇಷ್ಟಾದರೂ ಹೊಸೂರ ಹೆಸರು ಎಷ್ಟೋಕಡೆ ಹರಡಿದೆ. ಹೊಸೂರಿಗೆ ಆಗಾಗ್ಗೆ ಬಂದು ಹೋಗಿರುವವರೆಲ್ಲಾ ಹಲಸಿನಹಣ್ಣು ತಿನ್ನುವಾಗ ಹೊಸೂರನ್ನು ನೆನೆಯದೆ ಇರುವುದಿಲ್ಲ. ಮೈಸೂರಿನಲ್ಲಿ ನಮ್ಮ ದೂರದ ಸಂಬಂಧದವರಿದ್ದಾರೆ. ಒಂದು ವರ್ಷ, ಪರೀಕ್ಷೆ ಮುಗಿದ ಮೇಲೆ ನಾನು ಊರಿನಲ್ಲಿದ್ದಾಗ, ಯಾರೋ ಮೈಸೂರಿಗೆ ಬರುವವರೊಡನೆ ಅವರಿಗೆ ಉಪ್ಪಿನಕಾಯಿ ಮಾವಿನಕಾಯಿ ಕೊಟ್ಟುಕಳಿಸಿದ್ದೆ. ಅದನ್ನು ಈಗಲೂ ನೆನೆಯುತ್ತಾರೆ. ಪ್ರತಿವರ್ಷವೂ ಕಾಗದ ಬರೆಯುತ್ತಾರೆ ಅದಕ್ಕಾಗಿ. (ಹಾಳಾದದ್ದು ಆಕಾಲದಲ್ಲಿ ಗುರುತು ಕಂಡವರು ಯಾರೂ ಮೈಸೂರಿಗೆ ಹೋಗುವವರು ಸಿಕ್ಕುವುದೇ ಇಲ್ಲ.)

ಈ ಸಲ ಊರಿಗೆ ಹೋಗುವಾಗ, ಸ್ಟೇಷನ್ನಿಗೆ ಹೊರಡುವುದಕ್ಕೆ ಮುಂಚೆ ಅವರ ಮನೆಗೆ ಹೋಗಿದ್ದೆ. ಸ್ವಲ್ಪ ಮಾತುಕಥೆಯಾದ ಮೇಲೆ ಹೋಗಿಬರುತ್ತೇನೆಂದು ಹೇಳಿ ಕುಳಿತಿದ್ದವನು ಮೇಲಕ್ಕೆದ್ದೆ. ಸುಬ್ಬಮ್ಮ ನವರು 'ಶಿವೂ, ಈ ಸಲ ಖಂಡಿತ ಯಾರ ಕೈಲಾದರೂ ಮಾವಿನಕಾಯಿ ಕಳಿಸಿ ಕೊಡಬೇಕು. ಮರೆಯಬೇಡ, ಕಂಡೆಯಾ. ಲೋ ರಾಮು, ಶಿವು ಜೊತೆ ಸ್ಟೇಷನ್ನಿಗೆ ನೀನೊಂದು ಗಂಟು ತಗೊಂಡು ಹೋಗಿ ಕೊಡೊ ' ಎಂದರು. ನಮ್ಮ ಜನ, ದೂರದ ಸಂಬಂಧ, ಹಿರಿಯರು ಎಂದು ನಮಸ್ಕಾರ ಮಾಡಿದೆ. ' ಪರೀಕ್ಷೇಲಿ ಪ್ಯಾಸಾಗಲಿ, ದೊಡ್ಡ ಕೆಲಸ ಸಿಕ್ಕಲಿ ' ಎಂದು ಹರಸಿದರು. ನನಗೆ ಸ್ವಲ್ಪ ನಗು ಬಂದಿತು. ' ಹೋಗಿಬಿಟ್ಟು ಬರುತೀನಿ ' ಎಂದು ಹೊರಟೆ.

ನನ್ನೊಡನೆ ರಾಮುವೂ ಸ್ಟೇಷನ್ನಿಗೆ ಬಂದ. ಟಿಕೀಟು ತೆಗೆದುಕೊಂಡು, ಅವನಿಗೆ ಕಾಫಿ ಕೊಡಿಸಿ ನಾನೂ ಕುಡಿದು, ರೈಲಿನಲ್ಲಿ ಜಾಗ ನೋಡಲು ಹೊರಟೆ. ಅಷ್ಟುಹೊತ್ತಿಗಾಗಲೇ ರೈಲು ಭರ್ತಿಯಾಗಿ ಹೋಗಿತ್ತು. ಎಲ್ಲೂ ಜಾಗ ಸಿಕ್ಕಲಿಲ್ಲ. ಒಂದು ಗಾಡಿಯಲ್ಲಿ—ಸಣ್ಣಗಾಡಿ, ಹನ್ನೆರಡು ಜನ ಕೂಡುವುದು—ಬೇಕಾದಷ್ಟು ಸ್ಥಳವಿದ್ದಂತೆ ಕಂಡಿತು. ಒಬ್ಬ ಗೌಡನೂ ಅವನ ಹೆಂಡತಿಯೂ ಕಿಟಕಿಯ ಹತ್ತಿರ ಕುಳಿತಿದ್ದರು. ಗೌಡ ' ಬನ್ನಿ ಬುದ್ಧಿ ಮುಸ್ತಾಗಿ ಜಾಗ ಐತೆ ' ಅಂದ. ತಲೆ ಹಾಕಿ ನೋಡಿದೆ. ಅತ್ತಕಡೆ ಕಿಟಕಿಯ ಹತ್ತಿರ ಮೂರ್ತಿ–ನಮ್ಮ ಕ್ಲಾಸಿನ ಹುಡುಗ– ಕುಳಿತಿದ್ದ. ನಾನು ತಲೆ ಹಾಕಿ ನೋಡಿದಾಗ ನನ್ನ ಮುಖವನ್ನು ಚೆನ್ನಾಗಿ ದಿಟ್ಟಿಸಿ, ಆಳವಾದ, ಅರ್ಥ ಪೂರಿತವಾದ ದೃಷ್ಟಿಯಿಂದ ನನ್ನನ್ನು ನೋಡಿದನು. ಆದರೆ ಬಾ ಎಂದು ಕರೆಯ ಲಿಲ್ಲ. ಮೂರ್ತಿಯನ್ನು ನಾನು ಮೊದಲಿನಿಂದಲೂ ಬಲ್ಲೆ; ನಮ್ಮೂರಿನ ಹೆಡ್ ಮಾಸ್ಟರ್– ಪೋಸ್ಟ ಮಾಸ್ಟರ್ ರಂಗಣ್ಣನವರ ಅಳಿಯ. ಅವನೂ ನಮ್ಮೂ ರಿಗೇ ಹೊರಟಿದ್ದ ಹಾಗೆ ತೋರಿತು. ಪ್ರಯಾಣಕ್ಕೆ ಸರಿಯಾದ ಜೊತೆಯೇ ಸರಿ. ಅವನೊಡನೆಯೇ ಪ್ರಯಾಣ ಮಾಡಬಹುದಾಗಿತ್ತು. ಆದರೆ ಅದೇನೋ ಮೊದಲಿನಿಂದಲೂ ನಮ್ಮಿಬ್ಬರಿಗೂ ಸಲಿಗೆ ಬೆಳೆದುಬಂದಿರಲಿಲ್ಲ. ಅವನನ್ನು ಕಂಡರೆ ನನಗೆ ಆಗದೆ ಇರಲಿಲ್ಲ; ಆದರೂ ತೊನ್ನುಹಿಡುಕನೆಂದು ಅವನ ಸಹವಾಸವನ್ನು ದೂರಮಾಡಿದ್ದೆ. ನಾನೊಬ್ಬನಲ್ಲ; ಎಲ್ಲರೂ ಅವನನ್ನು ಸ್ವಲ್ಪ ದೂರಮಾಡಿದ್ದರು. ಈ ರೈಲಿನಲ್ಲಿ ಕೂಡ ಆ ಗೌಡಗೌಡಿತಿಯರನ್ನು

ಬಿಟ್ಟು ಮತ್ತೆ ಯಾರೂ ಅವನ ಗಾಡಿಗೆ ಸುಳಿದಂತೆ ತೋರಲಿಲ್ಲ. ಅವರು ಹಳ್ಳಿಯವರು, ತೊನ್ನಿನವನ ಪಕ್ಕದಲ್ಲಿ ಕುಳಿತುಕೊಳ್ಳಬಾರದು ಎಂಬ ವಿಷಯ ಅವರಿಗೇನು ಗೊತ್ತು! ಪಾಪ, ತಮ್ಮ ಪಾಡಿಗೆ ತಾವು ಒಕ್ಕಡೆ ಕುಳಿತಿದ್ದರು. ನಾನು ಜಾಗವಿಲ್ಲದೆ ಒದ್ದಾಡುವುದನ್ನು ನೋಡಿ ನನ್ನನ್ನೂ ಕರೆದರು. ಆದರೆ ನಾನು ಹೋಗಲಿಲ್ಲ. ಬೇರೆ ಜಾಗ ನೋಡಲು ಹೊರಟೆ. ಎಷ್ಟು ನೋಡಿದರೇನು, ಎಲ್ಲೆಲ್ಲೂ ಜಾಗವಿಲ್ಲ. ಮತ್ತೆ ಮೂರ್ತಿಯಿದ್ದ ಗಾಡಿಗೇ ಬರಲೇ ಎಂದು ಯೋಚಿಸಿದೆ. ಮನಸ್ಸು ಬರಲಿಲ್ಲ, ಎದೆ ಅಳುಕು ತ್ತಿತ್ತು. ಅಲ್ಲಿ ಬಿಟ್ಟರೆ ಜಾಗವೇ ಇಲ್ಲ. ಹೊತ್ತಾಗಿ ಬಂದದ್ದು ನನ್ನ ತಪ್ಪು; ಮೊದಲ ಘಂಟೆ ಹೊಡೆಯಿತು. ಯಾವುದೋ ಗಾಡಿಗೆ ನುಗ್ಗಿದೆ—ಬೈಸಿ ಕೊಂಡೆ, ನೂಕಿಸಿಕೊಂಡೆ; ಯಾವುದಕ್ಕೂ ಲಕ್ಷ್ಯಮಾಡದೆ ಕೊನೆಗೆ ಒಂದು ಅಂಗೈ ಅಗಲ ಸ್ಥಳ ದಕ್ಕಿಸಿಕೊಂಡೆ. ಕುಳಿತ ಕೂಡಲೇ ರೈಲು ಹೊರಟಿತು.

೨

ರೈಲು ವೇಗವಾಗಿ ಓಡುತ್ತಿತ್ತು. ಹೊಸೂರನ್ನು ಎಂದಿಗೆ ಸೇರುವೆನೋ ಎಂಬ ಹುಮ್ಮಸಿನಿಂದ ಹುರಿದುಂಬಿ ರೈಲಿನ ವೇಗವನ್ನು ಮೀರಿಸಿ ನನ್ನ ಮನಸ್ಸು ಆಗಲೇ ಹೊಸೂರನ್ನು ಸೇರಿತ್ತು. ಹೊಸೂರಿನ ಸಂಪೂರ್ಣ ಚಿತ್ರವೇ ಕಣ್ಣಮುಂದೆ ಬಂದು ನಿಂತಂತಾಯಿತು. ಮಗನು ಬರುತ್ತಾನೆಂದು ಕಾದಿರುವ ನಮ್ಮ ತಾಯಿತಂದೆ-ಅವರ ಚಿತ್ರವೊಂದು ಕಡೆ, ಅಣ್ಣ ಬರುತ್ತಾ ನೆಂದು ಕಾದಿರುವ ತಂಗಿಯ ಚಿತ್ರವೊಂದು ಕಡೆ. ಆ ಮೂವರನ್ನು ಎಂದಿಗೆ ನೋಡುವೆನೋ ಎಂದು ಒಂದೇ ಸಮನೆ ಹೃದಯ ಹಾತೊರೆಯುತ್ತಿತ್ತು. ಆಮೇಲೆ ಚಿತ್ರ ಬದಲಾಯಿಸಿತು. ನಮ್ಮೂರಿನ ಕೆರೆ—ತಿಳಿನೀರಿನಿಂದ, ಬಿಳಿ ದಾವರೆಯಿಂದ, ಅಲ್ಲ ಬೆಳ್ದಾವರೆಯಿಂದ, ಮೆರೆಯುವ ಕೆರೆ. ಅದರಲ್ಲಿ ಈಜುತ್ತಾ ಈಜುತ್ತಾ ತೇಲುತ್ತಾ ಮಲಗಿದ್ದರೆ—'ಬಾಳೆಲ್ಲ ಈ ಕೆರೆಯಂತೆ. ತಿಳಿಯಾದ ನಿರ್ಮಲವಾದ ಬಾಳು, ಹಿತಕರವಾದ ಬಾಳು. ಕೆರೆಯಲ್ಲಿ ಈಜು ತ್ತಿದ್ದರೆ—ಅಲ್ಲಿ ಜೊಂಡಿದೆ, ಅಲ್ಲಿ ಪಾಚಿಯಿದೆ, ಅಲ್ಲಿ ಕೆಸರಿದೆ—ಇವೆಲ್ಲಾ ಕಾಣುವುದಿಲ್ಲ. ಕಾಣುವುದಿಷ್ಟೆ: ಮೇಲೆ ನೀಲಿಯಾಗಸ, ಅದು ಅಗಾಧ

ವಾದ ಭವಿಷ್ಯತ್ತು; ಸುತ್ತಲೂ ಕೆರೆಯ ತಿಳಿನೀರು, ಅದೇ ನವಿಬಾಳು; ದೂರದಲ್ಲಿ ಮುಂದೆ ಕಾಣುವುದು, ಬಿಳಿದಾವರೆಗಳು—ಬಾಳಿನಲ್ಲಿ ಬಯಸಿ ಸ್ವಲ್ಪ ಪ್ರಯತ್ನಪಟ್ಟರೆ ಕೈಗೂಡುವ ನಲ್ಬಯಕೆಗಳು. ಇಂತಿರುವ ಜೀವನ ಜಲರಾಶಿಯಲ್ಲಿ ನಾವು ಸತ್ತರೆ, ನಮಗಾಗಿ ಅಳಬೇಕಾಗಿಲ್ಲ; ಆ ಸಾವು ಸಾವಲ್ಲ; ಅನಂತವಾದ ಆನಂದದಲ್ಲಿ ಕರಗಿ ಹೋಗಿ ಅದರಲ್ಲಿ ಒಂದಾಗುತ್ತೇವೆ, ನಮ್ಮ ಆತ್ಮವು ಆನಂದಸ್ವರೂಪನಾದ ವಿಶ್ವಾತ್ಮನಲ್ಲಿ ಒಂದಾಗುತ್ತದೆ—' ಎಂಬ ಈ ಭಾವನೆ ಬಂದು ಎಷ್ಟುಹೊತ್ತು ಈಜಿದರೂ ಬೇಸರವಾಗುವುದಿಲ್ಲ, ಹರುಷಗಡಲಿನಲ್ಲಿ ಮುಳುಗಿ ಹೋಗುತ್ತೇವೆ. ರೈಲಿನಲ್ಲಿ ಹೋಗುವಾಗಲೂ ನನಗೆ ಇದೇ ಭಾವನೆ; ಯಾವಾಗ ಕೆರೆಯಲ್ಲಿ ಈಜುವೆನೋ ಎಂದು ತವಕ. ಕಣ್ಣುಬಿಟ್ಟು ಕುಳಿತಿದ್ದುದು ಎಷ್ಟೋ ಅಷ್ಟೆ, ನಿದ್ದೆ ಬಂದವನಂತೆ ಕನಸು ಕಾಣುತ್ತಿದ್ದೆ. ಒಮ್ಮೆಯೇ ಅನ್ನಿಸಿತು, ಬಾಳೆಲ್ಲ ಕನಸಿನಂತೆ ಎಂದು; 'ಮನಸಿನಂತೆ ಕನಸು' ಎನ್ನುವಂತೆ 'ಬಗೆದಂತೆ ಬಾಳು' ಎಂದು.

ಹೀಗೆ ಭಾವಿಸುತ್ತಾ ಭಾವಿಸುತ್ತಾ, ಇಕ್ಕಟ್ಟಾದ ಜಾಗದಲ್ಲಿ ಕುಳಿತಿದ್ದ ತೊಂದರೆ ಕೂಡ ತೋಚಲಿಲ್ಲ. ಹಾಗೆಯೇ ಎರಡು ಘಂಟೆಯ ಮೇಲೆ ಹೊತ್ತು ಕಳೆಯಿತು. ರೈಲು ನಿಂತಿತು. ನಾವು ಇಳಿಯಬೇಕಾದ ಸ್ಟೇಷನ್ ಸಿಕ್ಕಿತು. ರೈಲು ನಿಂತು ಗಲಾಟೆ ಸ್ವಲ್ಪ ಕಳೆದ ಮೇಲೆ ನಾನು ಇಳಿದು ಸ್ಟೇಷನ್ ಆಚೆಗೆ ಹೋದೆ. ಬಸ್ಸು ಆಗಲೇ ಭರ್ತಿಯಾಗಿತ್ತು. ತಡಮಾಡುವುದು ಒಳ್ಳೆಯದಲ್ಲವೆಂದು ಬೇಗ ಹೋಗಿ ಬಸ್ಸು ಹತ್ತಿದೆ. ಐದು ನಿಮಿಷವಾದ ಮೇಲೆ ಇನ್ನಿಬ್ಬರು ಹತ್ತಿದರು. ಆಮೇಲೆ ಬಸ್ಸು ಹೊರಟಿತು. ಬಸ್ಸಿನಲ್ಲೂ ಜಾಗ ಸಿಕ್ಕಿತು, ಮನಸ್ಸಿಗೆ ಸಮಾಧಾನವಾಯಿತು. ಹಾಗೆಯೇ ಸವರಿಸಿಕೊಂಡು ಬಸ್ಸಿನೊಳಗೆ ಹಿಂದುಮುಂದೆ ನೋಡಿದೆ. ಮೂರ್ತಿಯಿರಲಿಲ್ಲ. ಬಸ್ಸಿಗೆ ಯಾಕ ಬರಲಿಲ್ಲವೋ ಗೊತ್ತಾಗಲಿಲ್ಲ.

ಮೂರ್ತಿಯ ಸ್ಥಿತಿಗತಿ ನನಗೆ ಸುಮಾರಾಗಿ ಗೊತ್ತಿತ್ತು. ಬಸ್ಸು ಛಾರ್ಜಿಗೆ ದುಡ್ಡಿರಲಿಲ್ಲವೇನೋ ಎಂದುಕೊಂಡೆ. ಮಾವನ ಮನೆಗೆ ಬರುತ್ತಾ ದುಡ್ಡು ತರದೇ ಇರುತ್ತಾನೆಯೇ, ಕಡೆಯಪಕ್ಷ ಪ್ರಯಾಣಕ್ಕೆ ಸಾಕಾಗುಷ್ಟಾದರೂ ತರದೆ ಇರುತ್ತಾನೆಯೇ. ಏನೋ ಇಷ್ಟವಿಲ್ಲ ಬಸ್ಸಿನ ಪ್ರಯಾಣ, ಗಾಡಿ ಮಾಡಿಕೊಂಡು ಬರಬಹುದು ಎಂದು ಸುಮ್ಮನಾದೆ.

ಒಂದು ಹಳ್ಳಿಯ ಹತ್ತಿರ ಬಸ್ಸು ನಿಂತಿತು. ಹೊಸೂರಿಗೆ ಅಲ್ಲಿ ಇಳಿದು ಮುಂದೆ ನಡೆದುಕೊಂಡು ಹೋಗಬೇಕು. ದಾರಿ ಚೆನ್ನಾಗಿಲ್ಲ, ಕಾಲುದಾರಿ. ಗಾಡಿ ತಿರುಗಿತಿರುಗಿ ಸ್ವಲ್ಪ ಸವೆದಿರುವದರಿಂದ ದಾರಿ ಚೆನ್ನಾಗಿ ಕಾಣುತ್ತದೆ. ಆದ್ದರಿಂದ ದಾರಿತಪ್ಪುವ ಹೆದರಿಕೆ ಇಲ್ಲ. ನಡೆದುಕೊಂಡೇ ಹೋಗಬಹುದು. ಮೂರು ಮೈಲುಗಳಷ್ಟು ನಡೆಯಬೇಕಾಗುತ್ತದೆ. ನನ್ನ ಸಾಮಾನು ಅಷ್ಟೇನು ಹೆಚ್ಚಾಗಿರಲಿಲ್ಲ. ಒಬ್ಬ ಆಳನ್ನೇ ಗೊತ್ತುಮಾಡಿಕೊಂಡು ಹೊರಟೆ.

ನಮ್ಮೂರಿನ ಪ್ರಯಾಣ ಎಂದರೆ ನನಗೆ ಬಲು ಇಷ್ಟ. ರೈಲುಪ್ರಯಾಣಕ್ಕೆ ರೈಲುಪ್ರಯಾಣ, ಬಸ್ಸಿಗೆ ಬಸ್ಸು; ಈ ಸುಖಪ್ರಯಾಣದ ಜೋತೆಗೆ ನಡಿಗೆಯೂ ಇದ್ದರೆ ಸುಖ ಹೆಚ್ಚೆಂದು ನನಗೆ ತೋರುತ್ತದೆ—ಒಬ್ಬಟ್ಟಿಗೆ ಉಪ್ಪಿನಕಾಯಿ ನಂಜಿಕೊಳ್ಳುತ್ತಾರೆ ಕೆಲವರು.

ಈ ಸಲದ ಪ್ರಯಾಣದ ಕೊನೆಯ ಭಾಗವಂತೂ ನನಗೆ ಬಹಳ ಸುಖಕರವಾಗಿ ಆನಂದದಾಯಕವಾಗಿ ಕಂಡಿತು. ನಾನು ಅರೆದಾರಿ ನಡೆದು ಹೋದಾಗ ಸಂಜೆಯಾಯಿತು. ನಾನು ನಡೆಯುತ್ತಿದ್ದ ಎದುರು ಪಡುವಲ ದೆಸೆ. ಆಗತಾನೇ ಆಕಾಶದಲ್ಲೆಲ್ಲಾ ಸಂಜೆಗೆಂಪು ಹರಡಿತ್ತು. ದೂರದಲ್ಲಿ ಬಾಂದಳದಲ್ಲಿ ಅರೆಮರೆಯಾದ ಕೆಂಪುಸೂರ್ಯಮಂಡಲವು—ಸಂಜೆವೆಣ್ಣಿನ ರಾಗಪೂರಿತವಾದ ಕೆಂಪುಮೊಗದಲ್ಲಿ ನರುದಂಬುಲದಿಂದ ಕಡುಗೆಂಪಾದ ನಗುವ ತುಟಿಗಳಂತಿತ್ತು.

ರಾತ್ರಿ ಏಳು ಗಂಟೆಯ ಹೊತ್ತಿಗೆ ಹರುಷದಿಂದ ಮನೆಯನ್ನು ಸೇರಿದೆ.

೩

ಬೆಳಗಾಯಿತು. ಉತ್ಸಾಹದಿಂದಲೇ ಊರನ್ನು ಸೇರಿದ್ದೆ. ನನ್ನ ತಾಯಿ ತಂದೆ ತಂಗಿಯರನ್ನು ಕಂಡು ತುಂಬ ಸಂತೋಷವೇ ಆಯಿತು. ಆದರೆ ಹೊಸೂರಿನಲ್ಲಿ ಎಷ್ಟು ಸುಖ ಬಯಸಿದ್ದೆನೋ ಅಷ್ಟು ಸುಖ ಮೊದಲು ದೊರೆಯಲಿಲ್ಲ. ಮೊದಲೆರಡು ದಿವಸ ಪ್ರಯಾಣದಿಂದ ಆಲಸ್ಯ; ಏನೋ ತಲೆ ನೋವು, ಮೈಕೈ ನೋವು. 'ಅಪ್ಪ, ಅಮ್ಮ, ಮಗೂ' ಎಂದು ನಮ್ಮಮ್ಮ

ನನಗೆ ಉಪಚಾರ ಮಾಡಿದ್ದೂಮಾಡಿದ್ದೆ. ನಾನು ಕೇಳಿದಾಗಲೆಲ್ಲ ಕಾಫಿ ಕಾಸಿಕೊಟ್ಟು ಬಿಡುತ್ತಿದ್ದರು. ನನಗೇನೋ ಹೊರಹೊರಟು ಹೊಸೂರ ನ್ನೆಲ್ಲ ಚೆನ್ನಾಗಿ ಸುತ್ತಬೇಕೆಂದು ಆಸೆ. ಆದರೆ ಅಮ್ಮ ಬಿಡಲೊಲ್ಲಳು.

ಮೂರನೆಯ ದಿನ ಹಾಸಿಗೆಯಿಂದೆದ್ದೆ. ಮೈ ಸ್ವಲ್ಪ ಹಗುರವಾಗಿತ್ತು. ಕಾಫಿ ಕುಡಿದಾದಮೇಲೆ ಇನ್ನೇನು ಹೊರಕ್ಕೆ ಹೊರಡಬೇಕು—ಎಂಟು ಘಂಟೆ ಸಮಯವಾಗಿತ್ತು—ನಮ್ಮ ತಂದೆ, 'ಶಿವೂ, ಏನು ಈಜುವುದಕ್ಕೋ? ಇವತ್ತೊಂದು ದಿನ ಬೇಡವೆಂದರೆ ಕೇಳುವದಿಲ್ಲವಲ್ಲ. ಇವತ್ತು ಖಂಡಿತ ಹೋಗಬೇಡ, ಮೈಕೈ ಬೇರೆ ನೋವು ಅಂತೀ' ಎಂದರು. ಅದೇ ರಾಗವನ್ನೆ ಳೆದು ನಮ್ಮ ತಾಯಿ—'ಯಾತಕ್ಕೂ ಇಲ್ಲ ಅಂದ್ರೆ ಪಾಪ, ಮೈಸೂರಿನಲ್ಲಿ ಹಾಳು ಹೋಟ್ಲೂಟ, ಎಣೆ-ಪಣ್ಣೆ ಸಿಕ್ಕಿದ್ದು ತಿನ್ನೋದು. ಹೊತ್ತಿಗೆ ಅನ್ನವಿಲ್ಲ ನೀರಿಲ್ಲ. ತಲೆ ಎಣ್ಣೆ ಸೀಗೇಕಾಯಿ ಕಂಡು ಯಾವ ಜನ್ಮ ವಾಯಿತೋ. ಶಿವೂ, ಇವತ್ತು ಬಿಸಿಬಿಸಿಯಾಗಿ ನೀರು ಹಾಕಿಕೊಳ್ಳಪ್ಪ. ತಲೆ ಬೇರೆ ನೋವು ಅಂತಿ. ತುಂಬ ಉಷ್ಣ.' ಎಂದರು. ಹಾಗೇ ಆಗಲಿ ಎಂದೆ.

ಇವತ್ತೂ ಈಜಿಗೆ ಕಲ್ಲುಬಿದ್ದಹಾಗಾಯಿತು. ಒಂದಿಬ್ಬರು ಸ್ನೇಹಿತ ರಿಗೆ ಕಾಗದ ಬರೆದೆ. ಅವನ್ನು ಅಂಚೆಗೆ ಹಾಕಬೇಕಾಯಿತು. ಅಂಚೆಕಛೇರಿ ಆಚೆಯ ಬೀದಿಯಲ್ಲಿ. ಕಾಗದ ಹಾಕಿ ಹಾಗೆಯೆ ಕೆಲವರನ್ನು ಮಾತನಾಡಿಸಿ ಕೊಂಡು ಬರೋಣವೆಂದು ಹೊರಟೆ. ಅಂಚೆಕಛೇರಿಗೆ ಎಂದರೆ ರಂಗಣ್ಣ ನವರ ಮನೆಗೆ ಹೋದೆ. ಅವರ ಮನೆಯ ಮುಂಭಾಗದ ದೊಡ್ಡದೊಂದು ಕೊಠಡಿಯೇ ಅಂಚೆಕಛೇರಿ. ಮನೆಯ ಮುಂದೆ ಕಂಭಸಾಲಿನ ಜಗುಲಿ. ಒಂದು ಕಂಬಕ್ಕೆ ಅಂಚೆಯ ಡಬ್ಬಿ ಕಟ್ಟಿತ್ತು. ಜಗುಲಿ ಹತ್ತಿ ಕಾಗದ ಹಾಕಿದೆ. ಕೊಠಡಿಯೊಳಗೆ ರಂಗಣ್ಣನವರು ಮೂರ್ತಿಯೊಡನೆ ಮಾತನಾಡುತ್ತಿದ್ದಂತೆ ಕೇಳಿಸಿತು. ಸರ್ವಸಾಮಾನ್ಯವಾದ ಮಾತುಕಥೆಯಂತಿರಲಿಲ್ಲ ಅವರ ಸಂಭಾ ಷಣೆಯ ಧ್ವನಿ. ಅವರಿವರ ಮಾತುಕಥೆಗಳನ್ನು ಕೇಳುವುದು ಮರ್ಯಾದೆಯಲ್ಲ. ಆದರೆ ಇವರ ಮಾತುಕಥೆಯಲ್ಲಿ ನನಗೆ ನಿಜವಾಗಿಯೂ ಒಂದು ವಿಧವಾದ ಕುತೂಹಲವುಂಟಾಗಿ, ಅಲ್ಲಿಯೇ ಸ್ವಲ್ಪ ಮರೆಯಾಗಿ ನಿಂತು ಅದಕ್ಕೆ ಕಿವಿಕೊಟ್ಟೆ. ಮೂರ್ತಿ ಸ್ವಲ್ಪ ದೀನಸ್ವರದಿಂದಲೇ ನುಡಿದಂತಾಯಿತು.

'ನಾನು ಇವತ್ತೇ ಊರಿಗೆ ಹೊರಡುತೀನಿ ಮಾವಯ್ಯ.'

'ಬೇಡ, ಮೂರ್ತಿ, ಬೇಡ; ಹೆಂಗಸರ ಮಾತಿಗೆಲ್ಲಾ ಹಾಗೆ ಮಾಡಬಾರದು. ನಾನು ತಾನೇ ಏನಾದರೂ ಅನ್ನಬಾರದ್ದು ಅಂದನೆ? ಎಲ್ಲಾ ನಮ್ಮ ದುರದೃಷ್ಟ, ನಿನ್ನ ಕರ್ಮ ಅಂದದ್ದು ತಪ್ಪೆ?' ಎಂದು ರಂಗಣ್ಣನವರು ನಿಧಾನವಾಗಿ ಹೇಳಿದರು.

ಇವೆಲ್ಲಾ ಸಮಾಧಾನದ ಮಾತುಗಳಂತೆ ತೋರಿದುವು. ಏನೋ ವಿಪರೀತ ನಡೆಯದೆ ಸಮಾಧಾನಕ್ಕೆ ಅವಕಾಶವಿರುವುದಿಲ್ಲ. ಏನೋ ವಾಗ್ಯುದ್ಧ ನಡೆದಿರಬೇಕೆಂದು ಯೋಚಿಸಿದೆ. ಅದರಲ್ಲಿ 'ಅತ್ತೆಮ್ಮ'ನವರ ಬಾಯೇ ಜೋರಾಗಿದ್ದಿರಬಹುದೆಂದೂ ಊಹಿಸಿದೆ; ಹಾಗೆ ಊಹಿಸಲು ಅವಕಾಶವಿತ್ತು.

ಮೂರ್ತಿ ಮತ್ತೆ, 'ಇಲ್ಲ, ನಾನು ಖಂಡಿತ ಹೊರಡಬೇಕು' ಎಂದು ಹೇಳಿದ.

'ಇಷ್ಟರಮೇಲೆ ನಿನ್ನ ಇಷ್ಟ' ಎಂದು ರಂಗಣ್ಣನವರು ಏನೋ ಒಂದು ಪಥವಾದ ಖಂಡಿತವಾಕ್ಕಿನಿಂದ ನುಡಿದು ಮೇಜಿನ ಮೇಲೆ ಜೋಡಿಸಿಟ್ಟುಕೊಂಡಿದ್ದ ಕಾಗದಗಳಿಗೆ 'ಪಟ್—ಪಟ್' ಎಂದು 'ಟಸ್ಸೆ' ಒತ್ತಲು ಮೊದಲುಮಾಡಿದರು. ಮೂರ್ತಿ ನೆಲವನ್ನು ದಿಟ್ಟಿಸುತ್ತಾ ಕೈಹಿಸುಕಿಕೊಳ್ಳುತ್ತಾ ನಿಧಾನವಾಗಿ ಹೊರಕ್ಕೆ ಬಂದ. ಮೊದಲು ನನ್ನನ್ನು ನೋಡಲಿಲ್ಲ. ಆದರೆ ನಾನು ಒಮ್ಮೆ ಅವನ ಮುಖವನ್ನು ನೋಡಿದೆ—ಏನೋ ತಡೆದುಕೊಂಡು ನುಂಗಿಕೊಂಡ ದುಃಖ, ಆ ದುಃಖನಿವಾರಣೆಗೆ ಏನಾದರೂ ಉಪಾಯ ಹುಡುಕಲು ಪುರುಷಪ್ರಯತ್ನ, ಅಗಾಧವಾದ ಚಿಂತೆ; ಏನು ಹೊಳೆಯಿತೋ ಏನೋ, ಕೊನೆಗೆ ಕಲ್ಲುಮನಸ್ಸು ಮಾಡಿಕೊಂಡು ಎಲ್ಲವನ್ನೂ ತೊರೆದ ವೈರಾಗ್ಯದ ಗೆಲವು—ಈ ಎಲ್ಲಾ ಭಾವನೆಗಳೂ ಒಂದಾದ ಮೇಲೊಂದು ಅವನ ಮುಖದಲ್ಲಿ ಮೂಡಿ ಮಾಯವಾಗುತ್ತಿದ್ದವು. ಇದ್ದಕ್ಕಿದ್ದಂತೆಯೇ ತಲೆಯಲ್ಲಾಡಿಸಿ ತನಗೆ ತಾನೆ ನಕ್ಕನು—ಹುಚ್ಚನಂತೆ. ತಲೆಯೆತ್ತಿದಾಗ ನನ್ನನ್ನು ನೋಡಿದನು. ಆಗ ಅವನ ದೃಷ್ಟಿ ತೀಕ್ಷ್ಣವಾಗಿತ್ತು, ಇಳೆಯನ್ನೇ ನುಂಗಿಬಿಡುವಂತಿತ್ತು. ಅವನನ್ನು ಮಾತನಾಡಿಸಬೇಕೆಂದು ಎನಿಸಿತು. ಬಾಯಿ ಬರಲಿಲ್ಲ, ಕೊರಳು ಬಿಗಿಯಿತು. ಅಲ್ಲಿ ನಿಲ್ಲದೆ ಹೊರಟೆ.

೪

ಎರೆದುಕೊಂಡಿದ್ದೆ. ಈಜಿದರೆ ಮೈಗಾಗುವುದಿಲ್ಲವೆಂದು ನನಗೆ ತೋರಿತು. ಇನ್ನೆರಡು ದಿನವೂ ಈಜಲಿಲ್ಲ, ಸುಮ್ಮನೆ ಕೆರೆಯ ಕಡೆ ಹೋಗಿ ಸುತ್ತಾಡಿಕೊಂಡು ಬರುತ್ತಿದ್ದೆ. ಅಂತೂ ಹಾಗೆಯೇ ಐದು ದಿವಸಗಳಾದವು. ಆರನೇ ದಿವಸ ರಾತ್ರಿ ಹೊತ್ತಿಗೆ ಮುಂಚೆ ಒಂಭತ್ತು ಘಂಟೆಗೇ ಮಲಗಿದೆ. ಯಾರು ಏನು ಹೇಳಿದರೂ ಕೇಳುವದಿಲ್ಲ, ಬೆಳಗಿನ ಜಾವ ಎದ್ದು ಕೆರೆಗೆ ಹೋಗುವದೇ ಖಂಡಿತ ಎಂಬು ಶಪಥ ಮಾಡಿ ಮಲಗಿದೆ. ಆದರೆ ಬೇಗ ನಿದ್ದೆಯೇ ಬಾರದು. ಎಂದು ಬೆಳಗಾಗುವದೋ ಎಂಬ ಆತುರ. ಎಂದಿಗೆ ನೀರಿನಲ್ಲಿ ಬಿದ್ದು ಈಜುವೆನೋ ಎಂದು ಅದೇ ಯೋಚನೆ. ಬಹಳ ಹೊತ್ತು ಹಾಗೆಯೇ ಆಲೋಚನಾಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗಿ ಹಾಗೆಯೇ ನಿದ್ರಾಸಾಗರದಲ್ಲಿ ಮುಳುಗಿ ಹೋದೆ.

ಬೆಳಗಿನ ಜಾವ ನಾಲ್ಕುವರೆ–ಐದು ಘಂಟೆಯ ಹೊತ್ತಿಗೆ ಎದ್ದೆ. ಮನೆಯಲ್ಲಿ ಇನ್ನೂ ಯಾರೂ ಎದ್ದಿರಲಿಲ್ಲ, ಏಳುವ ಹೊತ್ತೂ ಅಲ್ಲ. ಮೆಲ್ಲನೆ ಸದ್ದುಮಾಡದೆ, ಹಾಲು ಕುಡಿಯಲು ಹೊಂಚುತ್ತ ನಡೆಯುವ ಬೆಕ್ಕಿನಂತೆ, ಬೀದಿಯ ಬಾಗಿಲ ಚಿಲಕ ತೆಗೆದು ಬಾಗಿಲನ್ನು ಮೆಲ್ಲಗೆ ಮುಚ್ಚಿ ಹೊರಕ್ಕೆ ಹೊರಟೆ.

ಕೆರೆಯ ದಾರಿ ಹಿಡಿದು ಸ್ವಲ್ಪ ಜೋರಾಗಿಯೇ ನಡೆದು ಹೋದೆ. ತಂಗಾಳಿ ಮೆಲ್ಲನೆ ಬೀಸುತ್ತಿತ್ತು; ಒಮ್ಮೆ ಸ್ವಲ್ಪ ಬಿರುಸಾಗಿ ಬೀಸಿ, ಹೆಂಡತಿ ಕೆನ್ನೆಗೆ ಹುಡುಗಾಟಕ್ಕೆ ಹೊಡೆಯುತ್ತಾರಲ್ಲ, ಹಾಗೆ ನನ್ನ ಕೆನ್ನೆಗೆ ಹೊಡೆಯುವಂತೆ ಬೀಸಿ ತಕ್ಷಣವೇ— ಅಯ್ಯೋ, ಪೆಟ್ಟಾಯಿತೇನೋ ಪಾಪ— ಎಂದು ಸಂತೈಸುವಂತೆ ಮತ್ತು ಮೆಲ್ಲನೆ ನನ್ನ ತಲೆಗುರುಳನ್ನು ಸವರಿಕೊಂಡು ಬೀಸುತ್ತಿತ್ತು. ಆಗ ಇನ್ನೂ ಚೆನ್ನಾಗಿ ಬೆಳಕು ಹರಿದಿರಲಿಲ್ಲ, ಮಬ್ಬುಮಬ್ಬಾಗಿತ್ತು.

ಮನಸ್ಸಿಗೆ ಏನೋ ಒಂದು ವಿಧವಾದ ಉಲ್ಲಾಸ. ಹೃದಯದಲ್ಲಿ ಹರುಷ ಉಕ್ಕಿಹರಿಯುತ್ತಿತ್ತು. 'ಬಾಳುವುದೇತಕ್ಕೆ?' ಎಂದು ನನಗೆ ನಾನೇ ಕೇಳಿಕೊಂಡೆ. 'ಬಾಳಿನ ಒಟ ಲಿನ ಹರುಷವನು. ಹೀರುವುದಕೆ.' ಎಂದ

ಹೃದಯದ ಒಳದನಿಯೊಂದು ಉತ್ತರಕೊಟ್ಟಿತು. 'ಹೌದು, ಹೌದು; ನಿಜ, ನಿಜ' ಎಂದು ಆ ಸವಿನುಡಿಗಳನ್ನು ಒತ್ತಿ ಹೇಳುವಂತೆ ಹಕ್ಕಿಗಳು ಸುಸ್ವರದಿಂದ ಚಿಲಿಪಿಲಿಗುಟ್ಟುತ್ತಾ ಸುಖನಿದ್ದೆಯಿಂದೇಳುತ್ತಿದ್ದುವು.

ಬೇಗ ಬೇಗ ನಡೆಯುತ್ತಾ ಕೆರೆಯ ಏರಿಯ ಹತ್ತಿರಕ್ಕೆ ಬಂದೆ. ಪೂರ್ವ ದಿಕ್ಕಿನಲ್ಲಾಗಲೇ ತುಸು ನಸುಗೆಂಪು ಹರಡಿತ್ತು.

ಕೆರೆಯ ಏರಿಯ ಮೇಲಕ್ಕೆ ಬಂದೆ. ತಂಗಾಳಿ ಮಂದವಾಗಿ ಬೀಸುತ್ತಿತ್ತು. ಗಾಳಿ ಜೋರಾಗಿ ಬೀಸುತ್ತಿದ್ದರೆ ಕೆರೆಯಲ್ಲಿ ಕೂಡ ಅಲೆಗಳುಂಟಾಗಿ ಸೋಪಾನದ ಮೆಟ್ಟಲುಗಳಿಗೆ ಬಡಿಬಡಿದು ಮೊರೆಯುತ್ತವೆ. ಆದರೆ ಅಂದು ಮಂದಮಾರುತ. ಕೆರೆಯ ನೀರು ಅಲುಗದೆ, ನಿಂತಲ್ಲಿ ನಿಂತು,—'ನಾನು ಶಾಂತಿಯ ಬೀಡು, ಈಜಲು ಬಿದ್ದು ನನ್ನ ಶಾಂತಿಯನ್ನು ಕೆಡಿಸಬೇಡ' ಎನ್ನುವಂತಿತ್ತು. ದೂರದಲ್ಲಿ, ಆಚೆಯ ತೀರದಲ್ಲಿ ಆ ಬಿಳಿದಾವರೆಗಳ ಪುಂಜವು ಮಬ್ಬುಬೆಳಕಿನಲ್ಲಿ ಮಬ್ಬುಮಬ್ಬಾಗಿ ಬೆಳ್ಳಗೆ, ಶಾಂತಿಯುಕ್ತವಾದ ಮೊಗದ ಮಂದಸ್ಮಿತದಂತೆ ಕಾಣುತ್ತಿದ್ದಿತು. ಅದೇ ತೀರದ ಆಚೆ ಒಂದು ತೋಟ; ಅಲ್ಲಿ ಸಾಲಾಗಿ ತೆಂಗಿನ ಮರಗಳು; ನಾನು ಮನದಲ್ಲಿ ಬಗೆದದ್ದಕ್ಕೆಲ್ಲಾ ಹೂಗುಟ್ಟಿ ತಲೆದೂಗುವಂತೆ ಗಾಳಿಗೆ ಮೆಲ್ಲನೆ ಅತ್ತ ಇತ್ತ ಓಲಾಡುತ್ತಿದ್ದುವು.

ಹೆಚ್ಚಾಗಿ ಜನರ ಸುಳಿವಿಲ್ಲ; ಏರಿಯ ಕೆಳಗೆ, ಎಲ್ಲೋ ಒಬ್ಬಿಬ್ಬರು ತೋಟಕ್ಕೆ ಹೋಗುತ್ತಿದ್ದರು. ಮನಸ್ಸಿಗೆ ತೃಪ್ತಿಯಾಗುವವರೆಗೆ, ಹೃದಯ ಹಿಗ್ಗುವವರೆಗೆ ಈಜಲು ಇದೇ ಸಮಯವೆಂದು ಕೆರೆಯ ಏರಿಯ ಮಧ್ಯಕ್ಕೆ ಬಂದೆ—ಸೋಪಾನಕ್ಕೆ ಒಂದು ನೂರು ಹೆಜ್ಜೆ ಮುಂದೆ. ಅಲ್ಲಿ ಏರಿ ಬಲು ಕಡಿದಾಗಿತ್ತು. ಈಜುವವರಿಗೆ ಅನುಕೂಲವಾಗಲೆಂದು ಧುಮುಕಲು ಒಂದು ಹಾಸುಗಲ್ಲನ್ನು ಏರಿಯ ಮುಂದೆ ಎರಡು ಮೊಳ ಚಾಚುವಂತೆ ಹಾಕಿದ್ದರು.

ಕೆರೆಯ ಏರಿಯ ಮೇಲೆ ಆ ಕಲ್ಲಿನ ಹತ್ತಿರದಲ್ಲಿಯೇ ಒಂದು ಎಕ್ಕದ ಗಿಡ. ಕಾಚ ಹಾಕಿಕೊಂಡು, ಬಟ್ಟೆಗಳನ್ನೆಲ್ಲಾ ಬಿಚ್ಚಿ ಮುದುರಿ ಆ ಗಿಡದ ಬುಡದಲ್ಲಿಟ್ಟೆ. ಎಲ್ಲೋ ತುಸ ಛಳಿಯಾಯಿತು. ಮೈಕೈಗಳನ್ನೆಲ್ಲಾ ಸವರಿಕೊಂಡು ಕಲ್ಲಿನ ತುದಿಗೆ ಬಂದು ನಿಂತೆ.

ಯಾವುದಕ್ಕಾಗಿ ನಾಲ್ಕೈದು ದಿವಸಗಳಿಂದಲೂ ಬಯಸಿ ಆ ಬಯಕೆಯನ್ನೆಲ್ಲಾ ಬಿಗಿದಿಟ್ಟಿದ್ದೆನೋ ಆ ಬಯಕೆಯ ಕಟ್ಟು ಕತ್ತರಿಸಿದಂತಾಗಿ,

ಇನ್ನೇನು ಧುಮುಕಬೇಕು, ಕೈ ಮೇಲಕ್ಕೆ ಚಾಚಿ ಎತ್ತಿ ನಿಂತಿದ್ದೆ,—ಎದೆ ಝುಗ್ ಎಂದಿತು, ಕರುಳು ಹಿಂಡಿತು, ಕಾಲು ನಡುಗಿತು, ಮಂಜಿನ ಗಡ್ಡೆಯು ದರಷ್ಟು ಛಳಿ ಕೊರೆದಂತಾಗಿ ಮೈ ಜುಮ್ಮೆಂದಿತು, ತಲೆ ತಿರುಗಿತು; ಹಾಗೆಯೇ ಮೇಲೆಕ್ಕೆತ್ತಿದ್ದ ಕೈಗಳನ್ನು ಕೆಳಕ್ಕೆ ತಂದು ಕಣ್ಣುಗಳನ್ನು ಬಲವಾಗಿ ಮುಚ್ಚಿಕೊಂಡೆ—ಅಂಧಕಾರ, ಅಂಧಕಾರ, ಸುತ್ತಲೂ ಅಂಧಕಾರ.... ಐದು ನಿಮಿಷವಾಗಿರಬಹುದು, ಏರಿಯಮೇಲೆ ಹಸುರು ಹುಲ್ಲುಹಾಸಿನ ಮೇಲೆ ಮುಖ ಕೆಳಗೆ ಮಾಡಿ ಮಲಗಿದ್ದೆ. ಗಾಳಿ ಒಮ್ಮೆ ಮೈಮೇಲೆ ಬಲವಾಗಿ ಬೀಸಿ ಎಚ್ಚರಗೊಳಿಸಿತು. ಮನಸ್ಸಿನಲ್ಲಿ ಮಿಂಚಿನ ವೇಗದಿಂದ ಭಯಂಕರವಾದೊಂದು ಚಿತ್ರ ಬಂದು—'ನೋಡು, ನೋಡು' ಎಂದು ಎದೆಯನ್ನು ಚುಚ್ಚುಸಂತಿತ್ತು......

ಯಾವುದೋ ಕೈಯೊಂದು ನನ್ನ ಮೈಯನ್ನು ಒಮ್ಮೆ ತಡವಿ, ನನ್ನ ಕೈರಟ್ಟೆ ಹಿಡಿದುಕೊಂಡು ಎಳದ ಹಾಗಾಯಿತು. ಕೈ ತಣ್ಣಗೆ ಕೊರೆಯು ತ್ತಿತ್ತು. 'ಅಯ್ಯೋ ಹೆಣ, ಹೆಣ' ಎಂದು ಅರಚಿಕೊಂಡೆನಂತೆ. ಸ್ವಲ್ಪ ಹೊತ್ತಾಯಿತು. ಎಷ್ಟು ಹೊತ್ತೊ ನಾನರಿಯೆ—ಮತ್ತೆ ನನ್ನ ಕೈರಟ್ಟೆ ಹಿಡಿದು ಎತ್ತಿದ ಹಾಗಾಯಿತು—'ಅಯ್ಯೋ ಹೆಣ, ಹೆಣ, ಹಾಳು ಹೆಣವೇ ಹೋಗು, ತೊಲಗು; ನಾನು ಈಗ ಬರುವುದಿಲ್ಲ' ಎಂದು ಕೂಗಿದೆನಂತೆ. ಈ ಸಲ ಕೈ ಬೆಚ್ಚಗಿದ್ದಂತೆ ತೋರಿತು.

'ಶಿವೂ, ನಾನು, ಶಿವು—ಮಂಜಣ್ಣ. ಹೆಣ ಅಲ್ಲ, ನಾನು, ಶಿವು. ಏಳು, ಯಾಕೆ ಹೀಗೆ ಮಲಗಿದ್ದೀ ಛಳಿಯಲ್ಲಿ?' ಎಂದು ನನ್ನನ್ನು ಎಬ್ಬಿಸಿ ಕೂರಿಸಿ ತಾವು ಹೊದೆದಿದ್ದ ಶಾಲನ್ನು ನನ್ನ ಮೈತುಂಬ ಹೊದೆಸಿದರು. ನನಗೆ ಸ್ವಲ್ಪ ಎಚ್ಚರವಾದಂತಾಯಿತು. ಎಚ್ಚರದೊಡನೆ ಮನಸ್ಸಿಗೆ ಸ್ವಲ್ಪ ಧೈರ್ಯ ಬಂದಿತು.

ಕಣ್ಣುಬಿಟ್ಟು ಸುತ್ತಲೂ ನೋಡಿದೆ, ಬೆಳಕು ಹರಿದಿತ್ತು. ಎದುರಿಗೆ ಕುಳಿತಿದ್ದವರು ಮಂಜಣ್ಣ! ನಮ್ಮ ಸೋದರಮಾವ. ಅವರು ನನ್ನ ಮುಖ ನೋಡಿ ನಕ್ಕು—'ನಿನ್ನಂಥ ಅಂಜುಬುರುಕ ಪ್ರಪಂಚದಲ್ಲೇ ಇಲ್ಲ ಶಿವು. ಇದು ಯಾಕೆ ಹಾಗೆ ಕಿರಿಚಿಕೊಂಡೆ? ನೀನು ಕಿರಿಚಿದ್ದು ಕೇಳಿ ತೋಟಕ್ಕೆ ಹೋಗುತ್ತಿದ್ದವನು ಹಾಗೇ ಬಂದೆ. ಯಾವುದು ಹೆಣ, ಎಲ್ಲಿ?' ಎಂದರು.

ಮತ್ತೆ ಮೊದಲು ಕಂಡಿದ್ದ ಭಯಂಕರ ಚಿತ್ರ ಕಣ್ಣಿಗೆ ಕಟ್ಟಿದಂತಾಯಿತು. ಈಗ ಬೆದರಲಿಲ್ಲ. (ಮಂಜಣ್ಣ ಬೇರೆ ಅಂಜುಬುರುಕ ಎಂದು ಹಾಸ್ಯಮಾಡಿದ್ದಾರೆ.) ಆ ಚಿತ್ರ ಕಲ್ಪನೆಗೆ ಕಂಡ ಚಿತ್ರವೋ ಕಣ್ಣಿಗೆ ಕಂಡ ಚಿತ್ರವೋ ಎಂಬುದನ್ನು ಅರಿಯಲು ಕೆರೆಯ ಕಡೆ ತಿರುಗಿದೆ. ಹೆಣ, ನಿಜವಾಗಿಯೂ ನಾನು ಕಂಡದ್ದು ಹೆಣ. ನಾನು ಕೆರೆಗೆ ಧುಮುಕುವ ಮೊದಲು ಕಲ್ಲೆಸೆವ ದೂರದಲ್ಲಿ ಕಾಣುತ್ತಿದ್ದದ್ದು, ಈಗ ಹತ್ತಿರಕ್ಕೆ ನಾವು ಕುಳಿತಿದ್ದ ದಡದ ಹತ್ತಿರಕ್ಕೆ ತೇಲಿಕೊಂಡು ಬರುತ್ತಿತ್ತು. ಮಂಜಣ್ಣನವರೂ ಎವೆಯಿಕ್ಕದೆ ನೋಡುತ್ತಿದ್ದರು.

'ಮೂರ್ತಿಯ ಹೆಣ..!' ಕಣ್ಣುಗಳನ್ನು ಉಜ್ಜಿಕೊಂಡೆ. ಎಚ್ಚರವಾಗಿದ್ದೆನೋ, ಇಲ್ಲ, ಕನಸೋ ಗೊತ್ತಾಗಲಿಲ್ಲ. ಮೂಡಲಲ್ಲಿ ಕೆಂಪು ಹುಟ್ಟಿತ್ತು, ಬೆಳಗಾಗುತ್ತ ಬಂದಿತ್ತು. ಮತ್ತೆ ಚೆನ್ನಾಗಿ ದಿಟ್ಟಿಸಿ ನೋಡಿದೆ—'ಮೂರ್ತಿಯ ಹೆಣ..!'—ನನ್ನ ಕಣ್ಣುಗಳನ್ನು ನಂಬಲಾರದೆ ಹೋದೆ.

'ಮಾವ, ಮೂರ್ತಿಯ ಹೆಣ ಅಲ್ಲವೆ ನೋಡು!' ಎಂದೆ.

'ಹೌದು, ಶಿವು; ಮೊದಲು ನಂಬುವದಕ್ಕಾಗಲಿಲ್ಲ. ಈಗ ಹತ್ತಿರ ಹತ್ತಿರ ಬಂದಿದೆ. ರಂಗಣ್ಣನವರ ಅಳಿಯ, ಮೂರ್ತಿ. ಅಯ್ಯೋ ಪಾಪ! ಕೆರೆಗೆ ಬಿದ್ದು ಯಾಕೆ ಸತ್ತನೋ?'

'ಯಾಕೆ ಸತ್ತ?'—ಅದೇ ದೊಡ್ಡ ಪ್ರಶ್ನೆ. ಪ್ರಶ್ನೆಗೆ ಉತ್ತರ ಅರ್ಧ ಹೊಳೆಯಿತು. ಆದರೂ ನಿರ್ಧರವಾದ ಹೊರತು ಮನಸ್ಸಿಗೆ ನೆಮ್ಮದಿಯಿಲ್ಲ.

ಇಬ್ಬರೂ ಮೇಲಕ್ಕೆದ್ದೆವು. ಮಂಜಣ್ಣನವರೇ ಕಲ್ಲಿನ ಬಳಿಗೆ ಹೋಗಿ ಬಟ್ಟೆಯನ್ನೆಲ್ಲಾ ತೆಗೆದುಕೊಂಡು ಬಂದರು. ಬಟ್ಟೆ ಹಾಕಿಕೊಂಡೆ.

'ಶಿವೂ, ಒಟ್ಟೆಯ ಜೊತೆಯಲ್ಲಿ ಯಾವುದು ಕಲ್ಲು ಹೇರಿ ಕಾಗದ ಇಟ್ಟಿದ್ದೆಯಲ್ಲ, ತಗೋ' ಎಂದು ನನ್ನ ಕೈಗೊಂದು ಕಾಗದ ಕೊಟ್ಟರು—ಒಂದು ಕವರು, ಅಂಟು ಹಾಕಿರಲಿಲ್ಲ. ಒಳಗೊಂದು ಕಾಗದ ಇತ್ತು, ಕನ್ನಡದಲ್ಲಿ ಬರೆದಿತ್ತು. ನನಗೆ ಬಹಳ ಆಶ್ಚರ್ಯವಾಯಿತು. 'ನನ್ನದಲ್ಲ ಇದು' ಎಂದೆ.

'ಯಾವುದೋ ನನಗೆ ತಿಳಿಯದಪ್ಪ. ಅಂತೂ ಅಲ್ಲಿ ಇತ್ತು.' ಎಂದರು ಮಂಜಣ್ಣನವರು.

ಅಷ್ಟು ಹೊತ್ತಿಗೆ ಅದನ್ನು ತೆಗೆದು ನೋಡಿದೆ. ಮೂರ್ತಿಯ ಕಾಗದ; ತನ್ನ ಮಾವನವರಿಗೆ ಬರೆದಿದ್ದ. ಎಲ್ಲಾ ಬಿಟ್ಟು ಅವನ ಹೆಣವನ್ನು ನಾನೇ ಮೊದಲು ನೋಡಬೇಕೆ? ಯಾರ ಕೈಗೂ ಸಿಕ್ಕದೆ ಮೊದಲು ನನ್ನ ಕೈಸೇರ ಬೇಕೆ? ಏನೋ ನನ್ನ ಬಾಳಿಗೂ ಅವನ ಸಾವಿಗೂ ಸಂಬಂಧವಿರಬೇಕು, ಇಲ್ಲ ದಿದ್ದರೆ ಹಾಗಾಗುತ್ತಿರಲಿಲ್ಲ.

'ಮಾವ, ಮೂರ್ತಿಯ ಕಾಗದ!' ಎಂದೆ.

'ಮೂರ್ತಿಯ ಕಾಗದವೆ!' ಎಂದು ಬೆರಗಾಗಿ, 'ಎಲ್ಲಿ ಓದು ನೋಡೋಣ?' ಎಂದು ಬಹಳ ಕುತೂಹಲದಿಂದ, ಕೇಳಿದರು.

'ಮೊದಲು ರಂಗಣ್ಣನವರಿಗೆ ಸಮಾಚಾರ ತಿಳಿಸಿಬಿಡೋಣ' ಎಂದೆ. 'ತಿಳಿಸದೆ ಉಂಟೆ, ತಿಳಿಸಲೇಬೇಕು. ಒಂದು ಐದು ನಿಮಿಷ ತಡವಾಗ ಬಹುದು ಅಷ್ಟೆ. ಕಾಗದ ಓದಿಬಿಡು' ಎಂದು ಅತ್ಯಾತುರದಿಂದ ತವಕ ಗೊಂಡು ಕೇಳಿದರು.

ಒಮ್ಮೆ ಹೆಣದ ಕಡೆ ನೋಡಿದೆ. ಮೂರ್ತಿ ಏಕೆ ಸತ್ತನೆಂಬ ಪ್ರಶ್ನೆ ಮತ್ತೆ ಮೂಡಿತು. ಹೃದಯದಲ್ಲಿ ಏನೋ ಒಂದು ಬಗೆಯ ಆತಂಕವುಂಟಾ ಯಿತು. ಕಾಗದ ಓದಿಯೇಬಿಡೋಣವೆಂದು ಓದತೊಡಗಿದೆ.

'ಯಾರು ಈ ಕಾಗದವನ್ನು ಕಂಡರೂ ದಯವಿಟ್ಟು ಅದನ್ನು ಕೂಡಲೆ ಪೋಸ್ಟ್‌ಮಾಸ್ಟರ್ ರಂಗಣ್ಣನವರಿಗೆ ದಯವಿಟ್ಟು ತಲುಪಿಸುವುದು.

'ನಾನು ಯಾಕೆ ಪ್ರಾಣಹತ್ಯಮಾಡಿಕೊಂಡೆನೆಂದು ಯಾರೂ ಕೇಳ ಬೇಕಾಗಿಲ್ಲ. ನನ್ನನ್ನು ನೋಡಿರುವವರಿಗೆಲ್ಲಾ, ನನ್ನ ಮೃತದೇಹವನ್ನು ನೋಡಿದವರಿಗೆಲ್ಲಾ ನನ್ನ ಸಾವಿನ ಕಾರಣ ತಾನೇ ಗೊತ್ತಾಗುತ್ತದೆ. ಆದರೆ, ನನ್ನಂಥವರು, ನನಗಿಂತಲೂ ಕೇಡಾಗಿರುವವರು ಜೀವಂತರಾಗಿಯೇ ಇರುತ್ತಾರಲ್ಲ ಎಂದು ಕೇಳಬಹುದು. ದುಃಖಮಯವಾದ ಬಾಳಿನಲ್ಲಿ ಅವರಿಗೆ ಒಂದು ಹುಲ್ಲುಕಡ್ಡಿಯಾದರೂ ಇದೆ ಹಿಡಿದುಕೊಳ್ಳುವುದಕ್ಕೆ. ಕಹಿಯಾದ ಬಾಳಿನಲ್ಲಿ ಒಂದು ಕೊಂಚವಾದರೂ ಸವಿಯನ್ನು ಕಂಡಿರುತ್ತಾರೆ. ಹಾಗಿಲ್ಲದೆ ನಿರರ್ಥಕವಾಗಿ ಬದುಕಿದ್ದರೆ ಅಂಥವರೆಲ್ಲಾ ನನ್ನನ್ನು ಹಿಂಬಾಲಿಸುವುದು ಒಳ್ಳೆಯದು.

'ನಾವು ಯಾರಿಗೂ ಬೇಕಿಲ್ಲದಿರುವಾಗ ಬದುಕಿದ್ದೇನು? ನಿರಾಶೆಯಿಂದ ನೊಂದ ಹೃದಯವುಳ್ಳ ನಮ್ಮಿಂದ ಲೋಕಕ್ಕೆ ಏನು ಉಪಕಾರ? ನಾನು ಸತ್ತದ್ದೇ ಲೇಸು.

'ನಾನು ಯಾರಿಗೂ ಬೇಕಿಲ್ಲ.

'ಐದು ವರ್ಷ ತುಂಬುವವರೆಗೂ ನಾನು ನಮ್ಮ ಮನೆಯ ಮುದ್ದಿನ ಒಬ್ಬನೇ ಹುಡುಗು. ಐದು ವರ್ಷ ತುಂಬಿದಾಗ ನಮ್ಮ ತಂದೆ ಸತ್ತರು.

'ನನ್ನ ಎಂಟನೆಯ ವರ್ಷದಲ್ಲಿ ನನ್ನ ಹೆಜ್ಜೆಯ ಮೇಲೆ ಎಲ್ಲೊ ಕೊಂಚ ತೊನ್ನುಹತ್ತಿತು. ಆದರೂ ನಮ್ಮ ತಾಯಿ ಎಂದಿನಂತೆಯೇ ಮುದ್ದಾಡುತ್ತಿದ್ದರು. ಅಸಹ್ಯಪಟ್ಟುಕೊಳ್ಳುತ್ತಿರಲಿಲ್ಲ. ಸ್ಕೂಲಿನಲ್ಲಿಯೂ ಜೊತೆಯ ಹುಡುಗರು ತೊನ್ನಿನವನೆಂದು ನನ್ನನ್ನು ದೂರಮಾಡುತ್ತಿರಲಿಲ್ಲ. ಗೆಳೆತನಕ್ಕೆ ತೊನ್ನು ಒಂದು ಅಡ್ಡಿಯೆಂದು ಏನೂ ಅರಿಯದ ಬಾಲರು ತಿಳಿಯದೆ ಹೋದರು. ಅಲ್ಲದೆ, ಹೆಜ್ಜೆಯ ಮೇಲಿನ ತೊನ್ನು ಅಷ್ಟು ಅಸಹ್ಯವಾಗಿ ಕಾಣುತ್ತಿರಲಿಲ್ಲ.

'ವಯಸ್ಸಾಗುತ್ತ ಆಗುತ್ತ, ನಾನು ಐದನೇ ಫಾರಂಗೆ ಬಂದ ವೇಳೆಯಲ್ಲಿ, ಮೈಗೆಲ್ಲಾ ತೊನ್ನು ಹಬ್ಬಿತು—ಅಲ್ಲೊಂದು ಕಡೆ ಇಲ್ಲೊಂದು ಕಡೆ ಕಾಸಿನಗಲ ಕಾಸಿನಗಲ ಕಾಣಿಸಿಕೊಂಡಿತು. ಕೊರಳ ಮೇಲೂ ಅಲ್ಲಲ್ಲಿ ಸ್ವಲ್ಪ ಕಾಣಿಸಿಕೊಂಡಿತು. ಮುಖಕ್ಕೆ ಇನ್ನೂ ಏರಿರಲಿಲ್ಲ. ಬಟ್ಟೆ ಮೈಮುಚ್ಚಿ, ನನ್ನ ಸ್ವರೂಪ ವಿಕಾರವಾಗಿ ಕಾಣುತ್ತಿರಲಿಲ್ಲ. 'ಹೈಸ್ಕೂಲಿನ ಹುಡುಗರು, ಬುದ್ಧಿ ತಿಳಿದವರು, ನನ್ನನ್ನು ದೂರಮಾಡುತ್ತಾ ಬಂದರು. ಅವರಲ್ಲಿ ಏನೂ ತಪ್ಪಿಲ್ಲವೆಂದು ತಿಳಿದಿದ್ದೆ. ಆದರೂ ಮನಸ್ಸಿನಲ್ಲಿ ಬಲು ನೊಂದುಕೊಂಡೆ. ಒಬ್ಬರಿಗೂ ಬೇಕಿಲ್ಲದಿರುವ ಯಾರೊಬ್ಬರ ಕೆಳೆತನ ಬಯಸುವುದೂ ಹುಚ್ಚು ಎಂದು ನಾನೇ ಅವರೊಡನೆ ಕಲೆಯುವುದನ್ನು ಬಿಟ್ಟುಬಿಟ್ಟೆ. ಎಲ್ಲೊ ಮೂಲೆಯಲ್ಲಿ ಕೊನೆಯ ಬೆಂಚಿನಲ್ಲಿ ಕುಳಿತುಕೊಳ್ಳುತ್ತಿದ್ದೆ.

'ಎಸ್. ಎಸ್. ಎಲ್. ಸಿ. ಪರೀಕ್ಷೆಯಾಯಿತು. ನನಗೆ ಸ್ವಲ್ಪ ಪಿತ್ರಾರ್ಜಿತ ಆಸ್ತಿಯೂ ಇದ್ದಿತು. ಇನ್ನೇನು ಬೇಕಾಗಿದೆ? ಯಾರೋ ಬಂದು ನನ್ನ ಕೊರಳಿಗೊಂದು ಹೆಣ್ಣು ಬಿಗಿದರು. ನಾಯಿ ಹಸಿದಿತ್ತು, ಹಿಟ್ಟು ಹಳಸಿತ್ತು.

'ನಾನೂ ಮದುವೆಗೆ ಮೊದಲು ಹೆಣ್ಣು ನೋಡಲಿಲ್ಲ. ಹುಡುಗಿ ಯೇನೋ ಚೆಲುವೆಯೇ. ಹುಡುಗಿ ಮದುವೆಗೆ ಮೊದಲು ನನ್ನನ್ನು ನೋಡಿದ್ದರೆ ಖಂಡಿತ ಮದುವೆಗೆ ಒಪ್ಪುತ್ತಿರಲಿಲ್ಲವೆಂದು ಈಗ ಅನ್ನಿಸುತ್ತಿದೆ.

'ಅಂತೂ ನನಗೆ ಮದುವೆಯಾಯಿತು. ತೊನ್ನು ಮುಖಕ್ಕೂ ಏರಿತು. ತೊನ್ನು ವಿಕಾರಮಾಡುವುದೆಂದು ಅದುವರೆಗೂ ನಾನು ತಿಳಿದಿರಲಿಲ್ಲ.

'ಸಾಯುವ ಮೊದಲು ನನ್ನ ಮದುವೆಯೊಂದನ್ನು ನೋಡಬೇಕೆಂದು ನಮ್ಮ ತಾಯಿ ಯಾವ ಘಳಿಗೆಯಲ್ಲಿ ಅಂದರೋ, ನನ್ನ ಮದುವೆಯಾದ ಒಂದು ತಿಂಗಳಮೇಲೆ ತೀರಿಹೋದರು.

'ಸರಿ, ಎಲ್ಲವೂ ನೇರವಾಯಿತು ಎಂದುಕೊಂಡೆ. ತೊನ್ನು ಬೇರೆ ಮೈಯೆಲ್ಲೆಲ್ಲಾ ಪ್ರಬಲವಾಯಿತು. ನನ್ನ ಮುಖ ನೋಡಿಕೊಂಡರೆ ನನಗೇ ಅಸಹ್ಯವಾಗುತ್ತಿತ್ತು.

'ನಮ್ಮ ತಾಯಿ ಸತ್ತ ಎರಡುತಿಂಗಳಿಗೆ ನನ್ನ ಮಾವ ಅತ್ತೆ ಹೆಂಡತಿ ಎಲ್ಲಾ ನನ್ನನ್ನು ನೋಡಿಕೊಂಡು ಹೋಗಲು ಬಂದರು. ನಾನು ತೊನ್ನು ಹಿಡುಕನೆಂದು ನನ್ನ ಹೆಂಡತಿಗೆ ಗೊತ್ತಾಗಿತ್ತು. ಆದರೂ ಅವಳು ನನ್ನನ್ನು ದೂರಮಾಡಿದಂತೆ ಕಾಣಲಿಲ್ಲ. ನಾನು ಬರೆದ ಕಾಗದಕ್ಕೆಲ್ಲ ಸಮಂಜಸವಾಗಿ ಉತ್ತರ ಬರೆಯುತ್ತಿದ್ದಳು. ಆದರೆ ಮೈಸೂರಿಗೆ ಬಂದು ಹೋದ ಮೇಲೆ ನನ್ನ ಯಾವ ಕಾಗದಕ್ಕೂ ಉತ್ತರ ಬರೆಯಲಿಲ್ಲ. ಅವಳ ಮನಸ್ಸು ಬದಲಾಯಿಸಿರುವುದೆಂದು ಅರಿತೆ.

'ಪಾಪ, ಅವಳೇನು ಮಾಡಿಯಾಳು. ಮುಖ್ಯ, ನಾನು ಮದುವೆಗೆ ಒಪ್ಪಬಾರದಾಗಿತ್ತು. ಆಗ ನನಗೆ ಇಷ್ಟು ತೋಚಲಿಲ್ಲ. ಅವಳಿಗೆ ನನ್ನಿಂದಲ್ಲದೆ ಮತ್ತೆ ಯಾರಿಂದ ಸುಖದೊರೆಯಬೇಕು? ಆದರೆ ನನ್ನಿಂದ, ವಿಕೃತ ಸ್ವರೂಪನಾದ ನನ್ನಿಂದ ಅವಳಿಗೆ ಸುಖದೊರೆಯುವ ಬಗೆಯೆಂತು?

'ನನಗೆ ತಾನೇ ಇನ್ನು ಸುಖವೆಲ್ಲಿ?'

'ಓದುತ್ತಿರುವುದೆ ನನ್ನ ಸುಖವೆಂದು ಎನ್‌ಟ್ರೆನ್ಸ್ ತರಗತಿಗೆ ಸೇರಿದೆ. ಎಂದಿನಂತೆ ನನ್ನದು ಕೊನೆಯ ಬೆಂಚು. ಯಾರ ಹೃದಯದಲ್ಲೂ ನಾನು ಎಳ್ಳಷ್ಟು ಮರುಕವನ್ನೂ ಕಾಣಲಿಲ್ಲ. ಆದರೆ ಎಲ್ಲರನ್ನೂ ದೂಷಿಸಲಾರೆ. ಕೆಲವರು ಮೌನದಿಂದಿರುತ್ತಿದ್ದರು.

‘ ಪರೀಕ್ಷೆ ಮುಗಿಯಿತು.

‘ ನಾನು ಯಾತಕ್ಕೆ ಬದುಕಿರಲಿ ? ನನ್ನ ಹೊಟ್ಟೆ ಹೊರೆಯಲು ಬದುಕಿರಲೆ ? ನನ್ನ ಯಾವ ಆಸೆಗಾಗಿ, ನನ್ನ ಯಾವ ಆಸೆ ಕೈಗೂಡುವುದನ್ನು ನೋಡುವುದಕ್ಕಾಗಿ ನಾನು ಬದುಕಿರಲಿ ? ನಾನು ಸಾಯಬೇಕು. ತಾವರೆಗೊಳದಲ್ಲಿ ನಾನೊಂದು ಜೊಂಡು; ನಾನು ಲೋಕಕೆ ಅನಿಷ್ಟ. ನಾನು ಸಾಯಬೇಕು. ಸಾಯುವುದೊಂದೇ ನನ್ನ ಆಸೆಯಾಗಿತ್ತು.

‘ ಸಾಯುವ ಮುನ್ನ ಹೆಂಡತಿಯನ್ನು ನೋಡಬೇಕೆಂದೆನಿಸಿತು. ಅವಳು ನಿಜವಾಗಿಯೂ ನನ್ನೊಡನೆ ಬಾಳುವುದಾದರೆ, ಅವಳಿಗೂ ತೊನ್ನು ಹಿಡಿದರೂ ಚಿಂತೆಯಿಲ್ಲ, ಇಬ್ಬರೂ ಒಟ್ಟಿಗೆ ಬಾಳೋಣವೆಂದು ಈ ಊರಿಗೆ ಓಡಿದೆ. ನನ್ನ ಆಲೋಚನೆಯೇನೊ ಕ್ರೂರವಾದುದೇ. ಅವಳಿಗೇಕೆ ತೊನ್ನು ಹಿಡಿಯಬೇಕು ?

‘ ಹೆಂಡತಿಯನ್ನು ಕಂಡು ಮಾತನಾಡಿಸಿದೆ. ಮಾತಿಲ್ಲ, ಮೊದಲು ಮೌನ. ಅವಳು ಒಟ್ಟಿನಲ್ಲಿ ಚೆಲುವೆಯೇ. ಅವಳ ಕೈಗಳನ್ನು ಹಿಡಿದುಕೊಂಡು, ಒಂದು ಸಲ ಅವಳನ್ನು ಅಪ್ಪಿಕೊಂಡು, ಇನ್ನೇನೂ ಇಲ್ಲ, ಮನದಣಿಯ ಕಂಬನಿಗರೆದು ಬೀಡಿಕೊಳ್ಳೋಣವೆಂದೆನಿಸಿತು. ಕೈಹಿಡಿದುಕೊಳ್ಳಲು ಹೋದೆ. ಏನೋ ವಿದ್ಯುಚ್ಛಕ್ತಿ ಹರಿದು ಬಂದು ಕೈಗಳನ್ನು ಹಿಂದಕ್ಕೆಳೆದುಕೊಂಡಂತಾಯಿತು.

‘ ಮತ್ತೊಮ್ಮೆ ಮಾತನಾಡಿಸಿದೆ. ಅವಳೆ ಅದುವರೆಗಿನ ಮೌನದ ಅರ್ಥವನ್ನೆಲ್ಲಾ—‘ ಅಯ್ಯೋ, ನಾನು ಯಾಕೆ ಹುಟ್ಟಿದೆನೋ ’ ಎಂಬೆರಡು ಮಾತಿನಲ್ಲಿ ಅಡಗಿಸಿ ಹೇಳಿದಳು. ಬಿಕ್ಕಿಬಿಕ್ಕಿ ಅತ್ತಳು. ಅವಳ ತಂದೆತಾಯಿ ಅವಳ ಮನಸಿನ ಬಗೆಯನ್ನರಿತರು. ನನ್ನ ಅತ್ತೆ ಅನ್ನುವಷ್ಟು ನನ್ನನ್ನು ನೆವದಿಂದ ಅಂದರು. ಅವರದೂ ತಪ್ಪಿಲ್ಲ. ಎಷ್ಟೇ ಆಗಲಿ ಹೆತ್ತ ಕರುಳು. ತಂದೆ ನುಡಿದದ್ದು ಇಷ್ಟೆ; ‘ ನಮ್ಮ ದುರದೃಷ್ಟ, ನಿನ್ನ ಕರ್ಮ ’ ಎಂದರು.

‘ ಹೌದು; ನನಗೆ ಬೇಕಾಗಿದ್ದ ಉತ್ತರ ಅದು. ಹಾಳು ಸಮಾಜಕ್ಕೆ ಹೆದರದೆ ಸ್ವಲ್ಪ ಮುಂದುವರಿದರೆ ಅವರ ದುರದೃಷ್ಟವನ್ನು ಅವರು ನೇರ ಮಾಡಿಕೊಳ್ಳಬಹುದು; ನನ್ನ ಕರ್ಮವನ್ನು ನಾನು ತೊಡೆದು ಹಾಕಿಕೊಂಡಿರುತ್ತೇನೆ.

'ಎಂತಿದ್ದರೂ ನನ್ನ ಬದುಕಿನಿಂದ ನನ್ನ ಹೆಂಡತಿಗೆ ಸ್ವಲ್ಪವೂ ಸುಖ ವಿಲ್ಲ. ಈ ದುಷ್ಪರಿಣಾಮವನ್ನು ನಾನು ಮುಂದುಗಾಣದೆ ಹೋದೆ. ಖಂಡಿತ ನಾನು ಮದುವೆಗೆ ಒಪ್ಪಬಾರದಾಗಿತ್ತು. ಒಪ್ಪಿ ಅವಳನ್ನು ಆಮರಣಾಂತದ ದುಃಖಕ್ಕೆ ಗುರಿಮಾಡಿರುವನೇನೋ? ಅಂತೂ ಮಹಾ ಪಾಪಕಾರ್ಯ ಮಾಡಿದ್ದೇನೆ. ಸಾವೇ ಅದಕ್ಕೆ ತಕ್ಕ ಪ್ರಾಯಶ್ಚಿತ್ತ.

'ನನ್ನ ಸಾವಿಗೆ ಯಾರೂ ಕೊರಗಬೇಕಾಗಿಲ್ಲ, ಇದೇ ನನ್ನ ಕಡೆಗಾಲದ ಬಯಕೆ.'

* * * * * *

ಕಾಗದ ಓದಿದ ಕೂಡಲೆ ರಂಗಣ್ಣನವರ ಮನೆಯ ಕಡೆ ಹೊರಟೆ. ಹಿಂದಿರಿಗಿ ಒಂದು ಸಲ ಮೂರ್ತಿಯ ಹೆಣ ನೋಡಿದೆ. ಹೆಚ್ಚು ಹೊತ್ತು ನೋಡಲಾಗಲಿಲ್ಲ. ಜುಗುಪ್ಸೆಯಿಂದಲ್ಲ, ಬಾಳಿನ ಭಯಂಕರವಾದ, ದುಃಖ ಮಯವಾದ ಆ ದೃಶ್ಯವನ್ನು ನೋಡಲು ಎದೆಯಿಲ್ಲದಿರುವುದರಿಂದ.

* * * * * *

ಅದೇ ದಿನ ಸಂಜೆ ಕೆರೆಯ ಏರಿಯ ಮೇಲೆ ಹೋದೆ. ಆರು ಘಂಟೆ ಆಗಿಹೋಗಿತ್ತು.

ಹೊಸೂರಿನ ಕೆರೆಗೆ ಆಗಲೇ ಕೆಟ್ಟ ಹೆಸರಿಗೆ ಮೊದಲಾಯಿತು. ಒಂದು ದಿವಸಕ್ಕಾಗಲೇ ಜನರು ಕೆರೆಯನ್ನು ತೊರೆದುಬಿಟ್ಟರು. ಆದರೆ ಎಷ್ಟು ದಿನ ಹಾಗೆ ತೊರೆಯುವುದಕ್ಕಾಗುತ್ತದೆ?

ನನಗೂ ಕೆರೆಯ ಕಡೆ ಹೊರಡಲು ಮೊದಲು ಹೆದರಿಕೆಯಾಯಿತು. ಗಟ್ಟಿಮನಸ್ಸು ಮಾಡಿಕೊಂಡು ಹೊರಟೆ. ಮೂರ್ತಿ ಸತ್ತ ಜಾಗವನ್ನು ಒಮ್ಮೆ ನೋಡಬೇಕೆಂದು ಕುತೂಹಲ ಹುಟ್ಟಿತು. ಹೌದು, ಮೂರ್ತಿ ಸತ್ತ ಜಾಗವನ್ನು, ಮೂರ್ತಿಯನ್ನಲ್ಲ. ಅವನನ್ನು ಎಲ್ಲಿಂದ ತರುವದು ಇನ್ನು? ಜೀವಂತನಾಗಿದ್ದಾಗ ಅವನು ನನಗೆ ದೂರ. ಅವನ ತೊನ್ನು ನನಗೆಲ್ಲಿ ಬರುವದೋ ಎಂಬ ಭ್ರಾಂತಿಯಿಂದ ಅವನನ್ನು ದೂರ ಮಾಡಿದ್ದೆ. ಹೌದು, ನಾನೇ ದೂರ ಮಾಡಿದ್ದೆ. ಹಾಗೆ ಮಾಡದಿದ್ದರೆ ಚೆನ್ನಾಗಿರುತ್ತಿತ್ತು. ತನ್ನ ತೊನ್ನು ಇನ್ನೊಬ್ಬರಿಗೇಕೆ ಅಂಟಬೇಕು ಎಂದು ಅವನು ನನ್ನೊಡನೆ ಕರೆಯಲು ಹಿಂಜರಿಯುತ್ತಿದ್ದ—ನಾನು ರೈಲಿನಲ್ಲಿ ತಲೆ

ಹಾಕಿ ನೋಡಿದಾಗ ಅದಕ್ಕೆ ಅವನು ನನ್ನನ್ನು ಬಾ ಎಂದೂ ಕರೆಯದೆ ಇದ್ದದ್ದು. 'ನೀನು ಬರಬೇಡ, ನೀನೇಕೆ ಬರುವೆ' ಎಂದೆನ್ನುವಂತೆ ಆಳವಾದ ಅರ್ಥಪೂರಿತವಾದ ದೃಷ್ಟಿಯಿಂದ ನನ್ನನ್ನು ನೋಡಿದನು. ಆದರೆ ಅಂದು ನಾನೂ ಹಿಂದೆಗೆದದ್ದು ತಪ್ಪು, ನಮ್ಮ ನಡುವೆ ಇದ್ದ ಅಂತರವನ್ನು ನಾನೇ ಅಂದು ಅಳಿಸಬಹುದಾಗಿತ್ತು, ಅಳಿಸಬೇಕಾಗಿತ್ತು; ಅವನೊಡನೆಯೇ ಪ್ರಯಾಣ ಮಾಡಿ ಅವನ ಪ್ರಯಾಣವನ್ನು ಉಲ್ಲಾಸಕರವನ್ನಾಗಿ ಮಾಡಿದ್ದರೆ ಚೆನ್ನಾಗಿತ್ತು!..ಅವನು ಮಾವನ ಮನೆ ಬಿಟ್ಟು ಹೊರಟಾಗ ಹಿಂಬಾಲಿಸಿ, ನಡೆದ ವೃತ್ತಾಂತವೆಲ್ಲವನ್ನೂ ಆಗಲೇ ತಿಳಿದುಕೊಂಡು ಅವನನ್ನು ಸಮಾಧಾನಪಡಿಸಿದ್ದರೆ ಲೇಸಾಗುತ್ತಿತ್ತು! ಅವನಿಗೆ ಗೆಳೆತನದ ಗಂಟುಬಿದ್ದು, ಈ ಲೋಕವನ್ನು ಉಳಿಯಲು ಹಿಂದೆಗೆಯುತ್ತಿದ್ದನೇನೊ! ನನ್ನ ಒಂದೊಂದು ನಲ್ನುಡಿಯೂ ಅವನಿದ್ದ ಕತ್ತಲೆ ಮನೆಗೆ ಒಂದೊಂದು ಬೆಳಕುಗಂಡಿಯನ್ನು ತೆರೆಯುತ್ತಿದ್ದಿತೇನೋ!....ಅಂದು ಈ ಯೋಚನೆಗಳಿಂದೂ ಹೊಳೆಯಲಿಲ್ಲ, ಮೂರ್ತಿ ಬೇಕಾಗಿಲ್ಲ. ವಿಚಿತ್ರ!—ಸಾವು ಬೇಡದವರನ್ನು ಬೇಕಾದವರನ್ನಾಗಿ ಮಾಡುತ್ತದೆ! ಇಂದು ಮೂರ್ತಿ ಬೇಕು, ಅವನು ಬಂದರೆ ಅಪ್ಪಿಕೊಳ್ಳುತ್ತೇನೆ. ಆದರೆ ಮೂರ್ತಿ ಮತ್ತೆ ಬರುವನೆ?

ಕೆರೆಯ ಏರಿಯ ಮೇಲೆ ಹೋಗಿ, ಹೆಣವನ್ನು ಎಲ್ಲಿ ಕಂಡಿದ್ದೆನೋ ಅಲ್ಲಿ ಹೋಗಿ ಕುಳಿತೆ. ಅತ್ತ ಪಶ್ಚಿಮದಲ್ಲಿ ಸೂರ್ಯನು ಅರೆವಾಸಿ ಮುಳುಗುತ್ತಿದ್ದನು. ಆಕಾಶದಲ್ಲೆಲ್ಲಾ ಎಂದೂ ಇಲ್ಲದ ರಕ್ತವರ್ಣ.

ಒಮ್ಮೆ ಕೆರೆಯಲ್ಲೆಲ್ಲಾ ನನ್ನ ದೃಷ್ಟಿಯನ್ನು ಹರಿಸಿದೆ. ನಾನು ಅಂದು ರೈಲಿನಲ್ಲಿ ಯಾವ ಕೆರೆಯ ಚಿತ್ರವನ್ನು ನೆನೆದು ಅದನ್ನೇ ಕಣ್ಣಾರೆ ಕಂಡುದಕ್ಕಾಗಿ ಹರುಷಗೊಂಡಿದ್ದೆನೋ ಆ ಸೌಮ್ಯ-ಸುಂದರ ಚಿತ್ರವನ್ನು ಇಂದು ಕೆರೆಯಲ್ಲಿ ಕಾಣಲಿಲ್ಲ.

ರವಿ ಮುಳುಗಿದನು. ಅಂದಿನ ಬೆಳಗಿನಂತೆಯೇ ತಂಗಾಳಿ ಮೆಲ್ಲನೆ ಬೀಸುತ್ತಿತ್ತು. ನಿಶ್ಶಬ್ದ, ಎಲ್ಲೆಲ್ಲೂ ನಿಶ್ಶಬ್ದ. ನಡುನಡುವೆ ಆ ಮೌನವನ್ನು ಕೆಡಿಸುತ್ತಿದ್ದ ಹಕ್ಕಿಗಳ ಹಾಡಿನಲ್ಲೂ ಇಂಪಿಲ್ಲ. ಕೆರೆಯ ಕಡೆ ನೋಡುತ್ತಲೇ ಇದ್ದೆ. ಬೇಗ ಬೇಗ ಮುಸುಕುತ್ತಿದ್ದ ಮಬ್ಬಿನಲ್ಲಿ ಆ ಬಿಳಿದಾವರೆಯ ಪುಂಜವು ಎಲ್ಲೋ ಮರೆಯಾಗಿತ್ತು. ಇವತ್ತು ಕೆರೆಯಲ್ಲಿ ಏನೋ

ಒಂದು ವಿಧವಾದ ಶಾಂತಿ; ಸೌಮ್ಯ-ಭಯಂಕರವಾದ ಶಾಂತಿ, ನಾನು ಅಂದು ಅನುಭವಿಸಿದ ಸೊಗಬಾಳಿನ ಶಾಂತಿಯಲ್ಲ.

ಮೂರ್ತಿಯ ಬಾಳಂತೂ ತೀರಿತು; ಇನ್ನು ಅವನ ಹೆಂಡತಿ ? ಸಮಾಜ ಬದ್ಧರಾದ ತಂದೆತಾಯಿಗಳ ಕೈಗೆ ಸಿಕ್ಕಿದ್ದ ಆ ಮುದ್ದು ಹುಡುಗಿಯ ನೆನಪು ಬಂದಿತು.

ನನ್ನ ಎದುರಿನಲ್ಲಿದ್ದ ಕೆರೆ ಒಂದು ಕಣ್ಣೀರಿನ ಕೆರೆಯಂತೆ ತೋರಿತು.

ಮಬ್ಬು ತೀರ ಮುಸುಕಿತು. ಇರುಳು ಇಳೆಯನ್ನು ನುಂಗಿತು. ಹಗಲಾದ ಮೇಲೆ ಇರುಳಾಗಬೇಕಲ್ಲವೆ ? ಬಾಳಿನಲ್ಲೂ ಅದೇ ನಿಯಮವೆಂಬಂತೆ ತೋರಿತು.

ಆದರೆ ಕೆಲವರಿಗೆ ಹಗಲು ಕೂಡ ಮಬ್ಬು ಮಬ್ಬಾಗಿಯೇ ಕಾಣುತ್ತದೆ.

**ಬಗೆದಂತೆ ಬಾಳು !**

---

# ಸರೋಜಳ ಬೊಂಬೆ

'ಅರಳುತ್ತಿರುವ,—ಅರಳಿದುದಲ್ಲ—ಅರಳುತ್ತಿರುವ ರೋಜಾ ಹೂಗಳಂತಿರುವ ಮುದ್ದಾದ ಸಣ್ಣವಾದ ಕೆನ್ನೆಗಳು. ರೋಜಾ ಹೂವಿನ ಕೆಂಪು ಹೊಳಪಿನ ಛಾಯೆಯೇ ಮುಖದಲ್ಲೆಲ್ಲಾ ಹರಿದಿದೆಯೋ ಎಂಬಂತೆ ಕಾಣುವ ನಸು ಗುಲಾಬಿಯ ಬಣ್ಣ. ಧಳಧಳನೆ ಹೊಳೆಯುವ ನೀಲಿಯ ಕಣ್ಣುಗಳೆರಡು; ಶೈಶವಸರಳತೆಯನ್ನು ಚೆಲ್ಲುತ್ತಿರುವ ಕಣ್ಣುಗಳವು. ಗುಂಗುರುಗುಂಗುರಾದ ಹೊಂಬಣ್ಣದ ಕುರುಳೋಳಿ'—ಏನೋ ಬಹಳ ಅಸ್ವಾಭಾವಿಕವಾಗಿದೆಯನ್ನಬಹುದು ವರ್ಣನೆ; ಇರಬಹುದು. ಆದರೆ ನನ್ನ ಕಣ್ಣಿಗೆ ಬೊಂಬೆ ಕಂಡದ್ದು ಹೀಗೆ.

ಇತ್ತೀಚೆಗೆ, ನವರಾತ್ರಿ ಬಂತೆಂದರೆ ಬೊಂಬೆ ಕೂರಿಸಿ ಕೊಡುವ ಕೆಲಸ ನನ್ನ ಪಾಲಿಗೆ ಬಂದಿತ್ತು. ಮೇಲೆ ಹೇಳಿದ ಸೌಂದರ್ಯವುಳ್ಳ ಬೊಂಬೆಯನ್ನು ಕೂರಿಸೋಣವೆಂದು ಕೈಲಿ ಹಿಡಿದುಕೊಂಡಿದ್ದೆ. ಅದು ಬೊಂಬೆ, ಆದರೂ ನನಗೆ ಬೇರೆ ಅದು ಬೊಂಬೆಯಂತೆ ಕಾಣಲಿಲ್ಲ. ಜೀವವಿಲ್ಲದಿದ್ದರೇನು ಆ ಬೊಂಬೆಗೆ? ಅದರ ಕಿರಿಕಂಗಳಲ್ಲಿ, ತೊದಲುಮಾತನ್ನು ಬೀರಲು ಸರ್ವ ಸಾಹಸ ಮಾಡುತ್ತಿದ್ದಂತೆ ಕಾಣುತ್ತಿದ್ದ ಕೋಮಲ್ಪವಾದ ಕಡುಗೆಂಪಾದ ಆ ಕೊಂಕುತುಟಿಗಳಲ್ಲಿ, ಜೀವವು ಉಕ್ಕಿ ಬರುವಂತೆ ಕಾಣುತ್ತಿದ್ದಿತು.

ಬೊಂಬೆಯನ್ನು ಎರಡು ಕೈಗಳಲ್ಲಿಯೂ ಹಿಡಿದುಕೊಂಡು ಅದರ ತುಟಿಗಳನ್ನು ಮುತ್ತಿಟ್ಟೆ.

ಅಷ್ಟು ಹೊತ್ತಿಗೆ ನಮ್ಮ ತಾಯಿ ಬಂದರು—ಬಂದಂತೆ ತೋರಿತು. ಸರಕ್ಕನೆ ಬೊಂಬೆಯನ್ನು ಮಂಚದ ಮೇಲೆ ಕೂರಿಸಿಬಿಟ್ಟೆ. ಏನೋ ನಾಚಿಕೆಯಾದಂತಾಯಿತು. ನಾನು ಬೊಂಬೆಗೆ ಮುತ್ತಿಟ್ಟುದನ್ನು ನಮ್ಮ ತಾಯಿ ಕಂಡ ಮಾತ್ರಕ್ಕೆ ನಾಚಿಕೆಯೇಕಾಗಬೇಕು? ಏಕೋ ಹೇಳುವುದು ಕಷ್ಟ. ಅಂತೂ ಹಾಗಾದದ್ದುಂಟು.

'ಅಯ್ಯೋ, ನಾಚಿಗೆಗೇಡೇ ಸರಿ. ಬೊಂಬೆಗೆ ಮುತ್ತು ಕೊಡುತಾನೆ. ನಿನಗೆ ಬೇಗ ಮಗುವೊಂದಾದರೆ ಈ ಬರವನ್ನೆಲ್ಲ ತೀರಿಸಿಕೊಂಡು ಬಿಡಬಹುದು, ಅಲ್ಲವೆ?' ಎಂದು ನನ್ನ ಕಡೆ ನೋಡಿ ಗೊಳ್ಳನೆ ನಕ್ಕರು ನಮ್ಮ ತಾಯಿ. ಇದ್ದಕ್ಕಿದ್ದ ಹಾಗೆ ನಗುವನ್ನು ನಿಲ್ಲಿಸಿದರು. ಹೌದು, ಇದ್ದಕ್ಕಿದ್ದ ಹಾಗೆ. 'ಎಲ್ಲಿ, ಬೊಂಬೆ ಕೊಡು' ಎಂದು ಕೇಳಿದರು. ಕೊಟ್ಟೆ. ಕಣ್ಣುಮುಚ್ಚಿ ಕೊಂಡು, ದೀರ್ಘಶ್ವಾಸವನ್ನೆಳೆದು ಆ ಬೊಂಬೆಯನ್ನು ಎದೆಗಪ್ಪಿಕೊಂಡರು. ಎದೆಗಪ್ಪಿಕೊಂಡು, ಒಂದೇ ಒಂದು ಮುತ್ತಿನಲ್ಲಿ ತಮ್ಮ ಪ್ರೇಮವನ್ನೆಲ್ಲಾ ಹರಿಸಿಬಿಡುವಂತೆ ಅದರ ಸಣ್ಣ ತುಟಿಗಳಿಗೆ ಮನದಣಿಯ ಒಂದು ಮುತ್ತು ಕೊಟ್ಟರು. ಈ ಸಂದರ್ಭದಲ್ಲಿ ಅವರ ವರ್ತನೆಯನ್ನು, ನನ್ನ ವರ್ತನೆಯನ್ನು ಕಂಡು ಹಾಸ್ಯಮಾಡಿದ್ದ ನಮ್ಮ ತಾಯಿಯ ಈ ವರ್ತನೆಯನ್ನು, ಇನ್ನು ಯಾರಾದರೂ ಕಂಡಿದ್ದರೆ ಅವರು ಖಂಡಿತ ಹಾಸ್ಯ ಮಾಡುತ್ತಿದ್ದರು. ಆದರೆ ನನಗೆ ಹಾಗೆ ಅನ್ನಿಸಲಿಲ್ಲ. ನಮ್ಮ ತಾಯಿಯ ಮನೋಭಾವವನ್ನರಿತೆ. ಅವರ ಹೃದಯದ ಇರಿತವು ನನ್ನ ಹೃದಯವನ್ನು ತಾಗಿತು. ಸುಮ್ಮನೆ ಮೌನವಾಗಿ ನಿಂತೆ.

ಬೊಂಬೆಯನ್ನು ಹಿಡಿದುಕೊಂಡಿದ್ದಂತೆಯೇ ಎರಡು ಕೈಗಳನ್ನೂ ದೂರ ಚಾಚಿ, ಅಳಲನ್ನು ಅದುಮಿ, ನಗೆಯನ್ನು ನಟಿಸುತ್ತಾ ತಲೆಯಲ್ಲಾಡಿಸುತ್ತಾ ಬೊಂಬೆಯನ್ನು ದಿಟ್ಟಿಸಿ ನೋಡುತ್ತಿದ್ದರು ನಮ್ಮ ತಾಯಿ. ಕಂಬನಿಗಳೆರಡು ಅವರ ಕಣ್ಣುಗಳಿಂದ ಜಗುಳಿದುವು.

'ಸರೋಜಾ! ಅಯ್ಯೋ, ಸರೋಜ! ಸಾಯೋವಾಗಲೂ ಬೊಂಬೆಯನ್ನು ಪಕ್ಕದಲ್ಲೆ ಮಲಗಿಸಿಕೊಂಡಿದ್ದೆಯಲ್ಲೇ. ಹಾಸಿಗೆ ಹಿಡಿದಿದ್ದರೂ ಬೊಂಬೆಗೆ ಮಣಿಯ ಸರ ಪೋಣಿಸಿ ಹಾಕಿದೆ, ಫ್ರಾಕ್ ಹೊಲಿದು ತೊಡಿಸಿದೆ. ನೀನು ಮಾಡಿದ ಸರ, ನೀನು ಹೊಲಿದ ಫ್ರಾಕ್, ನಿನ್ನ ಬೊಂಬೆ. ನೀನೇ ಇಲ್ಲವಲ್ಲೇ! ನೀನು ಇದ್ದಿದ್ದರೆ—ನಿನಗೊಂದು ಪುಟ್ಟ ಮಗು ಆಗುತ್ತಿತ್ತು, ಈ ಬೊಂಬೆಯ ಹಾಗಿರುತ್ತಿತ್ತು. ಅದನ್ನು ನಾನು ಆಡಿಸುತ್ತಿದ್ದೆ. ಅದಕ್ಕೆ ಒಂದು ಫ್ರಾಕ್....ಅಯ್ಯೋ, ಬರೀ ಭ್ರಾಂತಿ. ನೀನೇ ಇಲ್ಲ, ನಿನ್ನ ಮಗು ಎಲ್ಲಿ ಬಂತು. ಸರೋಜಾ! ಸರೋಜಾ!' ಎಂದು ನಮ್ಮ ತಾಯಿ ಅಳುವುದಕ್ಕೆ ತೊಡಗಿದರು.

ನನ್ನ ಕಣ್ಣುಗಳಿಂದಲೂ ಕಂಬನಿಗಳುದುರುತ್ತಿದುವು.

ಸರೋಜ ನನ್ನ ಸೋದರಿ. ನನ್ನ ಪ್ರೀತಿಯ ತಂಗಿ. ತನ್ನ ಕಸೂತಿಗೆಲಸಕ್ಕೆಲ್ಲಾ ನನ್ನ ಕೈಲಿ ಚಿತ್ರ ಬರೆಯಿಸಿಕೊಳ್ಳುತ್ತಿದ್ದಳು. ಕಸೂತಿ ಕೆಲಸದಲ್ಲಿ ಬಹಳ ನಿಪುಣೆ. ಬಲು ಜಾಣೆ.

ಅಪ್ಪ ಅಮ್ಮ, ಮನೆ ತುಂಬ ಅಣ್ಣತಮ್ಮಂದಿರು ಅಕ್ಕತಂಗಿಯರು,—ಅವಳಿಗೆ ಎಲ್ಲಾ ಭಾಗ್ಯವೂ ಇದ್ದಿತು. ಅವಳ ಮನಸ್ಸೊಪ್ಪಿದ ವರನಿಗೆ ಕೊಟ್ಟು ಮದುವೆಯೂ ಆಗಿದ್ದಿತು. ಗುಲಾಬಿಯ ಹೂ ಎಷ್ಟು ಚೆಲುವಾಗಿದ್ದರೇನು, ಜೊತೆಯ ಹೂ ಮೊಗ್ಗುಗಳೆಷ್ಟಿದ್ದರೇನು, ಗಿಡವೆಷ್ಟು ಸೊಂಪಾಗಿದ್ದರೇನು, ಮಂದಮಾರುತನು ಎಷ್ಟು ತಂಪಾಗಿ ಬೀಸಿದರೇನು—ಅದೊಂದು ಹೂವನ್ನು ಮೊಗ್ಗಿನಲ್ಲಿಯೇ ಹುಳು ಕೊರೆದ ಮೇಲೆ? ನನ್ನ ತಂಗಿ ಹುಟ್ಟುರೋಗಿ. ದೇವರು ಅವಳಿಗೆ ಆರೋಗ್ಯಭಾಗ್ಯವನ್ನು ಕೊಡಲಿಲ್ಲ. ರೋಗದಲ್ಲಿಯೇ ನರಳಿ ನರಳಿ ಸತ್ತಳು. ಸತ್ತಾಗ ಅವಳಿಗೆ ಹದಿನಾಲ್ಕು ವರ್ಷ ಮಾತ್ರ.

ಹಬ್ಬಹಬ್ಬಕ್ಕೂ ಸರೋಜಳ ನೆನಪಾಗಿ ನಮ್ಮ ತಾಯಿ ಅವಳಿಗಾಗಿ ರೋದಿಸುವರು. ಹೋದ ನವರಾತ್ರಿಯಲ್ಲಿ ಅವಳು ಓಡಾಡಿಕೊಂಡದ್ದೆಲ್ಲ ಅವರ ಕಣ್ಣಿಗೆ ಕಟ್ಟಿದಂತಾಗಿರಬೇಕು. ಸಾಲದುದಕ್ಕೆ ಆ ನೆನಪನ್ನು ಕೆಣಕುವುದಕ್ಕೆ ಆ ಬೊಂಬೆ ಬೇರೆ.

ಆ ಬೊಂಬೆಯನ್ನು ನಮ್ಮ ತಾಯಿ ಇನ್ನೂ ಕೈಲಿ ಹಿಡಿದುಕೊಂಡೇ ಇದ್ದರು. ಒಂದು ಮಾತನ್ನೂ ಮತ್ತೆ ಆಡಲಿಲ್ಲ. ನಾನೂ ಮೌನವಾಗಿದ್ದೆ. ಅವರ ದುಃಖದ ಉದ್ವೇಗವು ಮತ್ತೆ ಉಕ್ಕಿ ಬಂದಂತಾಯಿತು. ಇದ್ದಕಿದ್ದ ಹಾಗೆ—'ಅಯ್ಯೋ, ಸರೋಜಾ!' ಎಂದು ಕಿರಿಚಿಕೊಂಡು ಇನ್ನೇನು ತಲೆ ತಿರುಗಿ ಬೀಳಬೇಕು—ಅಮ್ಮಾ ಎಂದು ನಾನು ತಡೆದು ಹಿಡಿದುಕೊಂಡೆ. ಅಮ್ಮ ಬೀಳಲಿಲ್ಲ. ಅಮ್ಮನೇನೋ ಬೀಳಲಿಲ್ಲ, ಆದರೆ ಅಮ್ಮ ಹಿಡಿದುಕೊಂಡಿದ್ದ ಬೊಂಬೆ ಕೆಳಕ್ಕೆ ಬಿದ್ದು ನುಚ್ಚುನೂರಾಯಿತು.

ನಮ್ಮ ಸರೋಜಳ ಹಿಂದೆ ಅವಳ ಬೊಂಬೆಯೂ ಹೋಯಿತು. ಅವಳನ್ನು ಬಿಟ್ಟಿರಲಾರದೆಯೋ ಏನೋ. ಬೊಂಬೆ ಹೋದರೆ ಹೋಗಲಿ, ಮತ್ತೊಂದನ್ನು ತರಬಹುದು. ಸರೋಜ?

ನಾನೇನೋ ಬೊಂಬೆ ಹೋದುದಕ್ಕೆ ಮೊದಲು ಅಷ್ಟು ಮರುಗಲಿಲ್ಲ. ಇನ್ನೂ ಹದಿನೈದು ಕೂಡ ಇಲ್ಲ, ನಮ್ಮ ಸರೋಜನಂಥ ಚಿಕ್ಕ ಹುಡುಗಿಯೇ ಬದುಕಿ ಬಾಳುವುದಕ್ಕಿಲ್ಲ. ಇನ್ನು ಬೊಂಬೆಯುದೇನು ಶಾಶ್ವತವೆಂದು ನನ್ನ ಭಾವನೆ.

ಆದರೆ ನಮ್ಮ ತಾಯಿಗೆ ಹಾಗೆ ಅನ್ನಿಸಲಿಲ್ಲ. ಅವರ ರೋದನವು ಮಿಗಿಲಾಯಿತು.

'ಅಮ್ಮಾ ಅಳಬೇಡವಮ್ಮಾ. ಅತ್ತತ್ತು ಕಣ್ಣಿಂಗಿಸಿಕೊಳ್ಳುತೀಯೆ ಅಷ್ಟೆ, ಬೇರೊಂದು ಬೊಂಬೆ ತಂದರಾಯಿತು, ಸುಮ್ಮನಿರಮ್ಮಾ' ಎಂದು ಸಮಾಧಾನಪಡಿಸಲು ಹೋದೆ.

ಸಮಾಧಾನೋಕ್ತಿಗಳಿಂದ ದುಃಖ ಶಮನವಾಗುವಂತಿದ್ದರೆ ಲೋಕದಲ್ಲಿ ದುಃಖವೆಂಬುದೇ ಇರುತ್ತಿರಲಿಲ್ಲ.

'ಸರೋಜಳ ನೆನಪಾದಾಗಲೆಲ್ಲಾ ಅವಳ ಬೊಂಬೆಯನ್ನು ನೋಡಿದರೆ ಸ್ವಲ್ಪ ಸಮಾಧಾನವಾಗುತ್ತಿತ್ತು. ಅದೂ ಇಲ್ಲವಾಯಿತೇ?' ಎಂದು ಅಳುತ್ತಲೇ ಇದ್ದರು.

'ಅಳಬೇಡಮ್ಮ, ಅಳಬೇಡಮ್ಮ' ಎಂದು ಎಷ್ಟೆಷ್ಟೋ ಸಮಾಧಾನಪಡಿಸಿದೆ. ಅವರು ಕೇಳಲಿಲ್ಲ. ಅವತ್ತೆಲ್ಲಾ ತಡೆಯಿಲ್ಲದೆ ಅತ್ತರು. ನವರಾತ್ರಿ ಒಂಭತ್ತು ದಿನವೂ ಒಮ್ಮೆಯಾದರೂ ಸರೋಜಳನ್ನು ನೆನೆನೆನೆದು ಕಂಬನಿ ಗರೆಯುತ್ತಿದ್ದರು.

ನಾವು ಎಷ್ಟು ಸಮಾಧಾನ ಬೇಕಾದರೂ ಮಾಡಬಹುದು. ಎಷ್ಟಾಗಲಿ ಹೆತ್ತ ಹೆಂಗರುಳಲ್ಲವೆ? ಉಳಿದೆಷ್ಟು ಜನ ಮಕ್ಕಳಿದ್ದರೂ ಸರೋಜ ಇದ್ದ ಹಾಗಾಯಿತೆ? ಇನ್ನೆಷ್ಟು ಮಕ್ಕಳು ಹುಟ್ಟಿದರೂ ಸರೋಜ ಮತ್ತೆ ಹುಟ್ಟಿ ಬರುವಳೇ?

ಇನ್ನು ಎಷ್ಟೇ ಬೊಂಬೆಗಳನ್ನು ಕೊಂಡು ತಂದರೂ ಸರೋಜಳ ಬೊಂಬೆಯನ್ನು ತಂದಂತಾಗುವುದೆ?

ಸರೋಜಳಿಗೆ ಕೊರಗುವುದಂತಿರಲಿ, ಸರೋಜಳ ಬೊಂಬೆಗಾಗಿ ನಮ್ಮ ತಾಯಿ ಇನ್ನೂ ಕೊರಗುವರು.

# ಸೋದರರು   

ಅಣ್ಣಾತಮ್ಮಂದಿರಿಬ್ಬರೂ ಒಂದೇ ಗಣಿಯಲ್ಲಿ ಕೆಲಸ ಮಾಡಿಕೊಂಡಿದ್ದರು. ಅಣ್ಣ ಹರಿಸಿಂಗ್; ಲಕ್ಷ್ಮಣಸಿಂಗ್ ಅವನ ತಮ್ಮ.

ಹರಿಸಿಂಗ್ ಒಳ್ಳೇ ಮೈಕಟ್ಟುಳ್ಳವನು; ಸ್ವಾಭಾವಿಕವಾಗಿ ಬಲಿಷ್ಠ ವಾದ ಅವನ ನೀಳ್ತೋಳುಗಳು ಕಬ್ಬಿಣದ ಸುತ್ತಿಗೆಯಿಂದ ಕಲ್ಲನ್ನು ಒಡೆದು ಒಡೆದು ಮತ್ತಷ್ಟು ಬಲಿಷ್ಠವಾಗಿದ್ದುವು. ಅವನ ಮೈಕಟ್ಟಿಗೆ ತಕ್ಕ ಎತ್ತರ. ಆದರೆ ಅಷ್ಟು ಸುಂದರನಲ್ಲ. ಕುರೂಪಿಯೂ ಅಲ್ಲ.

ಲಕ್ಷ್ಮಣನಿನ್ನೂ ಹುಡುಗನೆಂದೇ ಹೇಳಬೇಕು. ವಯಸ್ಸು ಇಪ್ಪತ್ತಿರ ಬಹುದು. ಅಣ್ಣನಿಗಿರುವಂತೆ ದೇಹದಾರ್ಢ್ಯದ ಸಂಪತ್ತಿಲ್ಲದಿದ್ದರೂ ಸೌಂದ ರ್ಯದ ಸೊಂಪು ಅವನ ಮೊಗದಲ್ಲಿ ಸೂಸುತ್ತಿತ್ತು. ಕೆಲಸಕ್ಕೆ ಸೇರಿ ಬಹಳ ಸ್ವಲ್ಪ ದಿನಗಳಾಗಿದ್ದುವು. ನೆಲದಾಳದ ಕೆಲಸದ ಕಗ್ಗತ್ತಲು ಅವನ ಸೌಂದ ರ್ಯದ ಬೆಳಕನ್ನು ಇನ್ನೂ ಮುಸುಕಿರಲಿಲ್ಲ.

ಅಣ್ಣಾತಮ್ಮಂದಿರಿಬ್ಬರೂ ಒಂದೇ ಶಾಖೆಯಲ್ಲಿ ಕೆಲಸಮಾಡುತ್ತಿದ್ದರು.

ಇಬ್ಬರೂ ಉಳಿ ಸುತ್ತಿಗೆಯಿಂದ ಕಲ್ಲನ್ನು ಒಡೆದು ಕೆಡವುತ್ತಿದ್ದಾಗ ಇಬ್ಬರ ಏಟುಗಳೂ ಒಂದಾದಮೇಲೊಂದು ಸಮಾನಾಂತರ ಕಾಲದಿಂದ, ಲಯಬದ್ಧವಾಗಿ ಎಡೆಬಿಡದೆ ಬೀಳುತ್ತಿದ್ದುವು.

ಅವರಿಬ್ಬರ ಬಾಳೂ ಅಂತೆಯೇ ಇದುವರೆಗೂ ಒಂದು ವಿಧವಾದ ಲಯಾನುಗುಣವಾಗಿ ಸಾಗಿದ್ದಿತು. ಬೆಳಗಾಗೆದ್ದರೆ ಸಂಜೆಯ ವರೆಗೂ ಗಣಿ ಯಲ್ಲಿ ಕೆಲಸ. ಕೆಲಸದಲ್ಲಿ ಇನ್ನೊಂದು ವ್ಯತ್ಯಾಸವಿಲ್ಲ.

ಲಕ್ಷ್ಮಣನಿಗೆ ತನ್ನ ಕೆಲಸದಲ್ಲಾಗಲೇ ಬೇಸರ ಹತ್ತಿತ್ತು. ಆದರೆ ಅಣ್ಣನು ದುಡಿಯುತ್ತಿರುವಾಗ, ಅಣ್ಣನು 'ಅವಳಿ'ಗಾಗಿ ತನ್ನ ಸಂಪಾದನೆ ಯಲ್ಲರ್ಧವನ್ನು ವೆಚ್ಚಮಾಡುತ್ತಿರುವಾಗ ತಾನು ಸುಮ್ಮನಿರುವುದು ಸರಿ ಯಾದುದಲ್ಲವೆಂದು ಕೆಲಸಕ್ಕೆ ಸೇರಿದ್ದನು. ಈ ಗಣಿಯ ಹಾಳು ಕೆಲಸದಲ್ಲಿ ಅವನಿಗೆ ಇಷ್ಟವಿಲ್ಲದಿದ್ದರೆ ಬೇರೆ ಕಡೆ ಕೆಲಸಕ್ಕೆ ಹೋಗಬಹುದಾಗಿತ್ತು. ಬೇರೆ ಕಡೆ ಹೋದರೆ ತನ್ನ ಹೊಟ್ಟೆಯನ್ನು ಹೊರೆಮಕೊಂಡಂತಾಗುವುದು, ಸರಿ; ಎಲ್ಲಿದ್ದರೂ ಹೇಗಾದರೂ ಹೊಟ್ಟೆಗೊಂದಿಷ್ಟು ಹಿಟ್ಟು ದೊರೆಯು ತ್ತದೆ;....ಅವಳಿಗಾಗಿ, ಯಾರೊಡನೆ ಒಂದೇ ಮನೆಯಲ್ಲಿ ಇಂದಿನವರೆಗೂ ಬೆಳೆದು ಯಾರ ಹೃದಯವನ್ನು ಸಂಪೂರ್ಣವಾಗಿ ತನ್ನದನ್ನಾಗಿ ಮಾಡಿಕೊಂಡಿ ದ್ದನೋ ಅವಳಿಗಾಗಿ ತಾನು ಅಲ್ಲಿಯೇ ಇರಬೇಡವೇ? ಅವಳಿಗಾಗಿ ತಾನು ಅಣ್ಣನ ಕಷ್ಟದಲ್ಲಿ ಭಾಗಿಯಾಗಿ ಅವಳನ್ನು ಪೋಷಿಸುವ ಭಾರದಲ್ಲರ್ಧ ವನ್ನು ಕೈಗೊಳ್ಳಬೇಡವೆ? ಆದ್ದರಿಂದ ಅಣ್ಣನೊಡನೆಯೇ ಕೆಲಸಕ್ಕೆ ನಿಂತನು. ಸೋದರರಿಬ್ಬರು ಒಂದೇ ಕಡೆ ಕೆಲಸಮಾಡುವುದೆಂದರೆ ಬಹಳ ಅಪರೂಪ. ಆದರೆ ಅವಳು....ಅವಳು ಇಬ್ಬರ ಬಾಳನ್ನೂ ಒಟ್ಟಿಗೆ ಬಿಗಿದಿದ್ದಳು.

'ಅವಳು' ಯಾರು?

'ಅವಳು—ಅವಳ ಹೆಸರು ಬೇಕಿಲ್ಲ—ಆ ಸೋದರರಿಬ್ಬರ ತಾಯಿಯ ಕಡೆಯ ದೂರದ ಸಂಬಂಧದವರ ಒಬ್ಬಳೇ ಮಗಳು. ಹುಟ್ಟಿದೊಡನೆಯೇ ತಾಯಿ ತೀರಿದಳು. ತಬ್ಬಲಿ ಮಗುವನ್ನು ತಂದೆ ಬಲು ಆದರದಿಂದ ಸಾಕು ತ್ತಿದ್ದನು. ಕಷ್ಟದ ಮೇಲೆ ಕಷ್ಟವನ್ನು ತಂದೊಡ್ಡುವುದರಲ್ಲಿಯೂ, ಸಾವಿನ ಮೇಲೆ ಸಾವನ್ನು ತಂದು ಹಾಕುವುದರಲ್ಲಿಯೂ ವಿಧಿಗೆ ಒಂದು ವಿಧವಾದ ಉಲ್ಲಾಸ, ಒಂದು ಬಗೆಯ ಆಟ ಎನ್ನುವ ಹಾಗೆ ಕಾಣುತ್ತದೆ. ಉಲ್ಲಾ ಸವೋ ಆಟವೋ ಎಂತಾದರೂ ಆಗಲಿ, ಹಾಗೆಯೇ ನಡೆದುಬಂದಿರುವುದರಿಂದ ಅದು ಒಂದು ವಿಧಿನಿಯಮ. ತಾಯಿ ಸತ್ತ ಒಂದು ವರ್ಷ ಕಳೆಯುವುದ ಕ್ಕಿಲ್ಲ, ತಂದೆ ತೀರಿದನು. ಅರ್ಧ ಹೆಂಡತಿಯ ಮಾತಿನ ಮೇರೆ, ಅರ್ಧ ನಿಜ ವಾದ ಕರುಣೆಯಿಂದ, ಹೀರಾಸಿಂಗ್ ಆ ಹೆಣ್ಣುಗೂಸನ್ನು ತನ್ನ ಮನೆಯಲ್ಲಿ ಕರೆದಿಟ್ಟುಕೊಂಡು ಸಾಕುತ್ತಿದ್ದನು.

ಅಂದಿನಿಂದಲೂ ಲಕ್ಷ್ಮಣನೂ ಅವಳೂ ಜೊತೆಯಲ್ಲಿ ಆಡಿ ಬೆಳೆದವರು. ಅವನಿಗೂ ಅವಳಿಗೂ ಎರಡು ವರ್ಷ ಹೆಚ್ಚು ಕಡಿಮೆ. ಅವಳು ಎಂದೂ ಹರಿಸಿಂಗನೊಡನೆ ಹೆಚ್ಚು ಬಳಕೆಯಿಂದ ನಡೆದುಕೊಂಡವಳಲ್ಲ. ತನಗಿಂತ ಬಹಳ ದೊಡ್ಡವನು ಎಂದೋ ಏನೋ.

ಹೀಗಿರಲು ಹೀರಾಸಿಂಗನ ಹೆಂಡತಿಯೂ ಕಾಲವಶಳಾದಳು. ಅಂದು ಇವಳಿಗೆ ಹನ್ನೆರಡು ವರ್ಷ. ಅಷ್ಟು ಚಿಕ್ಕವಳಾದರೂ ಮನೆಗೆಲಸದಲ್ಲರ್ಧ ವನ್ನೆಲ್ಲಾ ತಾನೇ ನಿರ್ವಹಿಸಿಕೊಳ್ಳುತ್ತಿದ್ದಳು. ಲಕ್ಷ್ಮಣನು ಅವಳಿಗೆ ನೆರ ವಾಗುತ್ತಿದ್ದನು. ಹೀಗೆ ಮೊದಲಿನಿಂದಲೂ ಅವರಿಬ್ಬರ ಶರೀರವೆರಡು, ಹೃದಯ ವೊಂದು.

ಹರಿಸಿಂಗನು ಇದನ್ನರಿತಿದ್ದನು. ಅವನ ಹೃದಯವೂ ಕೊಂಚ ಕೊಂಚ ಅವಳ ಕಡೆಗೇ ಒಲೆಯುತ್ತಿತ್ತು. ಆದರೆ ಎಷ್ಟಾದರೂ ತಮ್ಮ....ತಂದೆ ಬದುಕಿದ್ದಾನೆ....ಮನಸನ್ನನ್ನು ಬಿಗಿಹಿಡಿದುಕೊಂಡಿದ್ದನು.

ಹರಿಸಿಂಗನು ಆಗಲೇ ತಂದೆಯ ಜೊತೆಗೂ ಗಣಿಯಲ್ಲಿ ಕೆಲಸ ಮಾಡಿ ತನ್ನ ವಯಸ್ಸಿಗೆ ಮೀರಿ ಹಣ ಸಂಪಾದಿಸಿ, ತಂದೆಯ ಮುಪ್ಪಿನ ಕಾಲದಲ್ಲಿ ಸಹಾಯ ಮಾಡಲು ನೆರವಾದನು. ತಂದೆ ಹರಿಸಿಂಗನನ್ನೇ ಒಂದು ತುಸು ಹೆಚ್ಚು ಆದರದಿಂದ ಕಾಣುತ್ತಿದ್ದನು.

ತಂದೆ ಸಾಯುವುದಕ್ಕೆ ಮೊದಲು ಅವಳನ್ನು ಹರಿಸಿಂಗನಿಗೆ ವಿವಾಹ ಮಾಡಿಸಿ ಮೊಮ್ಮಗನನ್ನು ಕಣ್ಣು ತುಂಬ ನೋಡಿ ಸಂತೋಷದಿಂದ ಸಾಯ ಬೇಕೆಂದು ಬಯಸಿ, ತನ್ನ ಅಭೀಷ್ಟವನ್ನು ಇಬ್ಬರ ಕಿವಿಯ ಮೇಲೂ ಹಾಕಿ ಅವರ ಸಮ್ಮತಿಯನ್ನು ಕೋರಿದನು. ಹರಿಸಿಂಗನು ಒಳಗೊಳಗೇ ಹಿಗ್ಗಿ, 'ಅದಕ್ಕೇನು, ನಿಧಾನವಾಗಿ ಆಗಲಿ' ಎಂದು ಸಮ್ಮತಿಯನ್ನಿತ್ತನು. ಅವ ಳನ್ನು ಕೇಳಿದಾಗ ಮೌನದಿಂದಿದ್ದಳು.

ಅನೇಕ ವೇಳೆ ಮೌನವು ಸಮ್ಮತಿಯನ್ನು ಸೂಚಿಸುವುದಿಲ್ಲ.

ತಂದೆಯ ಬಯಕೆ ಕೈಗೂಡಲಿಲ್ಲ. ಕಾರಣಾಂತರದಿಂದ ಮದುವೆ ತಳ್ಳುತ್ತಾ ಬಂದಿತು. ಅವನು ಅಷ್ಟರಲ್ಲಿಯೇ ತೀರಿಹೋದನು. ಸಾಯುವ ಕಡೆಗಾಲದಲ್ಲಿಯೂ ತನ್ನ ಬಯಕೆಯನ್ನು ಮತ್ತೆ ಮತ್ತೆ ಬಯಸಿ ಸತ್ತನು. ಅವನು ಮಡಿವಾಗ ಅವಳಿಗೆ ಹದಿನೆಂಟು ವರ್ಷ.

ತಂದೆಯ ಸಾವಿಗಾಗಿ ಎಲ್ಲರೂ ಕೊರಗಿದರು. ತಂದೆಯ ಸಾವಿಗಾಗಿ ಹೆಚ್ಚು ಕಾಲ ಕೊರಗಿ ಕೊರಗಿನಿಂದ ಕುಗ್ಗುವವರು ವಿಮಳ.

ಈ ಸಾವಿನಿಂದ ಅನೇಕ ಬದಲಾವಣೆಗಳಾದವು. ಲಕ್ಷ್ಮಣನ ಹೃದಯದಲ್ಲಿ ನಿರಾಶೆಯಾಗಲೇ ತಲೆ ಹಾಕಿತ್ತು. ಆದರೆ ಆಸೆಪಡುವುದು ಅವನ ಜಾಯಮಾನ. ನಿರಾಸೆಯನ್ನು ಮೊಳಕೆಯಲ್ಲೇ ಮುರಿದನು. ತಾನು ಅವಳಿಗಾಗಿಯೇ ಜೀವಿಸುವುದೆಂದು ತಿಳಿದನು.

ಆದರೆ ಅವಳ ಹೃದಯದಲ್ಲಿ ನಿರಾಶೆ ತಾನೇ ತಾನಾಗಿ ಬೇರೂರಿತು. ಆ ನಿರಾಶೆಯನ್ನು ಲಕ್ಷ್ಮಣನಿಗೆ ಹೇಳಲು ಮಾತ್ರ ಬಾಯಿ ಬರದು.

ತಂದೆಯ ಸಾವಿನಿಂದ ಹರಿಸಿಂಗನಿಗೆ ಮನೆಯ ಯಾಜಮಾನ್ಯ ಸಿಕ್ಕಿತು. ಆದ್ದರಿಂದ ಅವಳನ್ನು ಮದುವೆಯಾಗಲು ಅವನಿಗೆ ಒಂದು ಹಕ್ಕು,—ತಂದೆಯ ಇಚ್ಛೆಯ ಪ್ರಕಾರ—ಆ ಹಕ್ಕಿನಿಂದ ಒಂದು ಅಧಿಕಾರ ದೊರೆಯಿತು.

ತಂದೆ ತೀರಿದ ಮೇಲೆ ಲಕ್ಷ್ಮಣನೂ ಅಣ್ಣನೊಡನೆ ಗಣಿಯಲ್ಲಿ ಕೆಲಸಕ್ಕೆ ಸೇರಿದನು. ಇಬ್ಬರೂ ಯಾವಾಗಲೂ ಒಂದೆಡೆಯಲ್ಲಿ ಕೆಲಸಮಾಡುತ್ತಿದ್ದರು. ಅಷ್ಟು ಸಮೀಪವಿದ್ದೂ ಅವರಿಬ್ಬರ ನಡುವೆ ಒಂದು ಸಮುದ್ರ ಸೃಷ್ಟಿಯಾಗುತ್ತಾ ಬಂತು. ಸ್ವಭಾವತಃ ತಮ್ಮನು ಮೃದುಹೃದಯವುಳ್ಳವನು. ಯಾವುದನ್ನೂ ಹೆಚ್ಚು ಮನಸ್ಸಿಗೆ ಹಚ್ಚಿಕೊಳ್ಳುವವನಲ್ಲ.

ಇಬ್ಬರೂ ಅವಳಿಗಾಗಿ ಕೆಲಸ ಮಾಡುತ್ತಿದ್ದರು. ದೂರವಿದ್ದು ಅವಳು ಇಬ್ಬರನ್ನೂ ಒಟ್ಟುಗೂಡಿಸಿದ್ದಳು. ಆದರೆ ಅಂತು ಎಷ್ಟು ದಿನ ಸಾಗೀತು. ಅವಳು ಒಬ್ಬನನ್ನು ಮಾತ್ರ ವರಿಸಬೇಕು.

* * * * * *

ಅಣ್ಣತಮ್ಮಂದಿರಿಬ್ಬರೂ ಒಂದೇ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದರೆಂದು ಹಿಂದೆಯೇ ಹೇಳಿದೆ.

ಬೇಸಗೆ ಕಾಲ. ಮಧ್ಯಾಹ್ನ ಮೂರು ಗಂಟೆಯ ಸಮಯ. ಹೊರಗೆಲ್ಲಾ ತಡೆಯಲಾರದಷ್ಟು ಬಿಸಿಲು. ಗಣಿಯೊಳಗೂ ಅದರ ಪ್ರಭಾವ, ಅದರ ಝಳ ತೋರಿಬರುತ್ತಿದೆ.

ಆ ಅಣ್ಣತಮ್ಮಂದಿರು ಕೆಲಸ ಮಾಡುತ್ತಿದ್ದ ಶಾಖೆ ಇನ್ನೂ ಹೊಸದಾಗಿ ತೋಡಿದ್ದು. ಸದ್ಯದಲ್ಲಿ ಆ ಶಾಖೆಯಲ್ಲಿ ಕೆಲಸ ಮಾಡುವವರು ಅವರಿಬ್ಬರೇ.

ಹರಿ ಕೆಲಸಮಾಡುತ್ತಿದ್ದವನು ಸುತ್ತಿಗೆಯನ್ನು ಕೆಳಗೆಸೆದನು. ಸ್ವಲ್ಪ ಹೊತ್ತು ನೆಲವನ್ನು ದಿಟ್ಟಿಸಿ ನೋಡಿ ಮತ್ತೆ ಉಳಿಯನ್ನು ರೊಯ್ಯನೆ ಬಿಸುಟನು. ಇದೇನೆಂದು ತಮ್ಮನು ಅಣ್ಣನೆಡೆಗೆ ಓಡಿ ಬಂದನು. ಹರಿ ತನ್ನ ಹಣೆಯ ಬೆವರುಹನಿಗಳನ್ನು ಒರಿಸಿಕೊಳ್ಳುತ್ತಿದ್ದನು.

'ಏನು, ಆಯಾಸವೇ ಹರೀ, ಸುಧಾರಿಸಿಕೋ. ನೀರು ಕೊಡಲೇನು?'

ತಮ್ಮನ ಮಾತಿಗೆ ಉತ್ತರವಿಲ್ಲ. ಹರಿ ಮೌನವಾಗಿದ್ದನು. ಆ ಮೌನದ ಆಳದ ಅರ್ಥವನ್ನು ತಿಳಿಯುವುದು ಯಾರಿಗೂ ಅಸಾಧ್ಯ. ಆದರೆ, ಅವನ ಕಣ್ಣಿನ ಕಡುಗೆಂಪು ಅವನ ಹೃದಯದ ಭಾವೋದ್ರೇಕವನ್ನೆಲ್ಲಾ ಹೊರಗೆಡು ವುತ್ತಿತ್ತು. ಉಳಿಯೇಟಿನಿಂದ ಹೊರಡುವ ಕಿಡಿಯು ನೆನಪನ್ನು ತರುವಂತಿತ್ತು. ಲಕ್ಷ್ಮಣನಿಗೆ ಅಷ್ಟು ತೀಕ್ಷ್ಣವಾಗಿ ಕಂಡಿತು ಅಣ್ಣನ ಕಣ್ಣಿನಲ್ಲಿ ಕಾಣು ತಿದ್ದ ಆ ಕನಲಿನ ಕೆಂಪು. ಅಣ್ಣನ ಮನೋಭಾವನನ್ನು, ಅವನ ಇಚ್ಛೆಯನ್ನು, ಮುಂದಿನ ಪರಿಣಾಮವನ್ನು ಎಲ್ಲವನ್ನೂ ಅರಿತು ಯಾವುದಾದರೂ ರೀತಿ ಯಿಂದ ಮನಸ್ತಾಪವನ್ನು ಹೋಗಲಾಡಿಸಬೇಕೆಂದು ಬಹಳ ಯೋಚಿಸುತ್ತಾ ಕೈ ಹಿಸುಕಿಕೊಳ್ಳುತ್ತಿದ್ದನು.

ಇಬ್ಬರೂ ಅವಳ ಹೆಸರನ್ನು ಮಾತ್ರ ಉಚ್ಚರಿಸಲಿಲ್ಲ. ಕೊನೆಗೆ ಲಕ್ಷ್ಮ ಣನು—'ಅಣ್ಣಾ, ಬೇಡ....' ಎಂದು ಮೃದುವಾಗಿ ನಿಧಾನವಾಗಿ ಹೇಳಿದನು.

ಆ ಮೃದುವಾಣಿಗೆ ಒಂದು ಮೊಳಗಿನ ಉತ್ತರ. 'ಅವಳ ಮೇಲೆ ನಿನ್ನ ದೇನು ಅಧಿಕಾರ?'

ಅಧಿಕಾರದ ಮಾತು ಯಾವಾಗ ಬಂದಿತೋ ಇಲ್ಲವೋ ಲಕ್ಷ್ಮಣನು ಒಮ್ಮೆ ಹುಸಿನಗೆ ನಕ್ಕನು. ಅವನ ಮೃದುಹೃದಯವು ಕಲ್ಲಿನಂತಾಯಿತು. ಕೆಲವರಿಗೆ ಕೋಪ ಬರುವುದೇ ಇಲ್ಲ. ಬಂದರೆ ತಡೆಯುವುದು ಕಷ್ಟ. ಲಕ್ಷ್ಮ ಣನು ಅದೇ ಮೊಳಗಿನ ರಭಸದಿಂದ ಉತ್ತರಕ್ಕೆ ಮಾರುತ್ತರವನ್ನಿತ್ತನು:

'ನಿನಗಿಂತಲೂ ಹೆಚ್ಚು ಅಧಿಕಾರ ನನಗಿದೆ....' ಲಕ್ಷ್ಮಣನು

ಅಣ್ಣನ ಮಾತಿಗೆ ಎಂದೂ ಪ್ರತಿಯಾಡಿದವನಲ್ಲ.

ಅಣ್ಣನಿಗೆ ರೇಗಿತು. ಮಿತಿಮೀರಿದ ಕೋಪದೊಡನೆ ಹೃದಯವೂ ಉಬ್ಬಿತು. ಕೈ ಮುಷ್ಟಿಮಾಡಿ ಹುಬ್ಬು ಗಂಟಿಕ್ಕಿದನು.

ಎಲ್ಲೋ ಸ್ವಲ್ಪ ಮುಂದೆ, ಗವಿಯೇ ಕಳಚಿ ಬೀಳುವುದೋ ಎಂಬಂತೆ ತಲೆಯ ಮೇಲೆ ಬಂಡೆ ಬಿರಿದ ಶಬ್ದವಾಯಿತು. ಮೇಲಿನಿಂದ ಮಣ್ಣಿನ ಹೆಂಟೆ ಕಲ್ಲುಗಳು ಉದುರಿದುವು. ಇಬ್ಬರೂ ತಿರುಗಿ ನೋಡಿದರು. ಏನೂ ಪ್ರಮಾದವಿಲ್ಲದ್ದನ್ನು ನೋಡಿ ಒಬ್ಬರ ಮೊಗವನ್ನೊಬ್ಬರು ದಿಟ್ಟಿಸಿ ನೋಡಿದರು.

ಅವಳ ಹೆಸರನ್ನು ಇಬ್ಬರೂ ಉಚ್ಚರಿಸಲಿಲ್ಲ.

ಹರಿ ನುಡಿದನು: ‘ಬರಿಯ ಮಾತಿನಿಂದ ಮುಗಿಯುವುದಲ್ಲ ಈ ಕಲಹ. ನಿನ್ನ ಕೊನೆಯ ಮಾತೇನು, ಹೇಳು?’—ಖಂಡಿತವಾಕ್ಧ್ವನಿಯಿತ್ತು.

‘ಖಂಡಿತ ಆಗದು....’ ಎಂದನು ತಮ್ಮ.

‘ನಾನು ಆಗಿಸುತ್ತೇನೆ’ ಎಂದು ಹರಿ ತಮ್ಮನಿದ್ದೆಡೆಗೆ ನುಗ್ಗಿ ಹೋಗಿ ಅವನನ್ನು ಬಲವಾಗಿ ದಬ್ಬಿ ನೂಕಿದನು.

ಲಕ್ಷ್ಮಣನು ನೆಲಕ್ಕುರುಳಿ, ನಾಲ್ಕು ಮಾರು ಮುಂದೆ ಹೋಗಿ ಆಗ ತಾನೇ ಉದುರಿದ್ದ ಕಲ್ಲುಗಳ ಮೇಲೆ ಬಿದ್ದನು. ಸ್ವಲ್ಪ ಹೊತ್ತು ಜ್ಞಾನ ತಪ್ಪಿದವನಂತೆ ಬಿದ್ದಿದ್ದು ಆಮೇಲೆ ಚೇತರಿಸಿಕೊಳ್ಳುತ್ತಾ ಮೆಲ್ಲನೆ ನೆಲದ ಮೇಲೆ ಕೈಯೂರಿ ಮೇಲಕ್ಕೇಳುವುದರಲ್ಲಿದ್ದನು.

ಹರಿ ಕೈ ಸವರಿಕೊಳ್ಳುತ್ತಾ ನಿಂತಿದ್ದನು. ತಮ್ಮನು ಚೇತರಿಸಿಕೊಳ್ಳುವುದರಲ್ಲಿಯೇ ಅವನನ್ನು ನಿರ್ಬಲನನ್ನಾಗಿ ಮಾಡಿ ಕೊನೆಯುತ್ತರವನ್ನು ಪಡೆಯಬೇಕೆಂದು ಹರಿ ಇನ್ನೇನು ನುಗ್ಗಬೇಕು—‘ಧಡಂ’ ಎಂದು ಸದ್ದಾಯಿತು. ನಿರ್ಬಲನಾಗಿ ಬಿದ್ದಿದ್ದ ಲಕ್ಷ್ಮಣನ ಮೇಲೆ ರಾಶಿ ಕಲ್ಲು-ಮಣ್ಣು ಬಿದ್ದಿತು.

ಹರಿ ನುಗ್ಗಿ ಹೋದನು. ಬೇಗ ಬೇಗ ಕಲ್ಲುಮಣ್ಣನ್ನು ಬಗೆದು ಒಕ್ಕಡೆಗೆ ನೂಕಿ ಲಕ್ಷ್ಮಣನನ್ನು ಎತ್ತಿಕೊಂಡು ಬಂದು ತಾನು ಹಾಕಿಕೊಂಡಿದ್ದ ಹೆಚ್ಚು ಬಟ್ಟೆಯನ್ನೆಲ್ಲಾ ಬಿಚ್ಚಿ ಹಾಸಿ ಅದರ ಮೇಲೆ ಮಲಗಿಸಿ, ಅವನ ಮೈ ಕೈ ಮೇಲೆ ಧೂಳನ್ನೆಲ್ಲಾ ಕೊಡವಿ, ಅಲ್ಲಲ್ಲಿ ಒಸರಿ ಬರುತ್ತಿದ್ದ ರಕ್ತ

ವನ್ನೆಲ್ಲಾ ಒರಸಿ ಒರಸಿ....ಮಾತನಾಡಿಸಲು ಹೋದನು. ಕೊರಳು ಬಿಗಿದಂತಾಯಿತು.

ಸೋದರಪ್ರೇಮದ ಚಿಲುಮೆಯುಕ್ಕಿ ಕೋಪಾಗ್ನಿಯನ್ನು ಆರಿಸಿ ಬಿಟ್ಟಿತು. ಏನೇ ಆಗಲಿ, ಒಂದೇ ಕರುಳಲ್ಲವೆ?

ಸರ್ವಪ್ರಯತ್ನದಿಂದ 'ತಮ್ಮಾ....ಲಕ್ಷ್ಮಣಾ....' ಎಂದು ಕುಗ್ಗಿದ ದೀನಸ್ವರದಿಂದ ಕರೆದನು.

ಸ್ವಲ್ಪ ಹೊತ್ತಿನ ಮೇಲೆ ಲಕ್ಷ್ಮಣನು ಎಚ್ಚತ್ತು... 'ನೀ....ರು...' ಎಂದನು.

ಹರಿ ತಾನು ತಂದಿದ್ದ ನೀರಿನ ಬುಡ್ಡಿಯಿಂದ ಸ್ವಲ್ಪ ನೀರನ್ನು ತಮ್ಮನ ಬಾಯಿಗೆ ಹಾಕಿದನು.

ಒಮ್ಮೆ ತಮ್ಮನ ಮುಖವನ್ನು ಕರುಣಾಪೂರಿತವಾದ ದೃಷ್ಟಿಯಿಂದ, ನನ್ನನ್ನು ಕ್ಷಮಿಸು ತಪ್ಪಾಯಿತು ಎಂದು ಕೇಳುಕೊಳ್ಳುವಂತೆ ನೋಡಿದನು. ತಮ್ಮನ ಮುಖದಲ್ಲಿ ಒಮ್ಮೆ ಮೆಲುನಗೆಯಾಡಿತು. ಅಣ್ಣನನ್ನು ದಿಟ್ಟಿಸಿ ನೋಡಿದನು. ಇಬ್ಬರ ನೋಟಗಳು ಸಂಧಿಸಿದುವು. ತಮ್ಮನು ಅಣ್ಣನನ್ನು ಕ್ಷಮಿಸಿದ್ದನು.

'ಅಣ್ಣಾ....'

'ಮಗೂ....ಲಕ್ಷ್ಮಣಾ....'

'ನೀನು....ಅವಳನ್ನು....' ಎಂದು ಹೇಳುತ್ತಾ ಹಾಗೆಯೇ ಕಣ್ಣುಮುಚ್ಚಿಕೊಂಡನು.

'ಲಕ್ಷ್ಮಣಾ, ಲಕ್ಷ್ಮಣಾ..' ಎಂದು ಹಾಗೆಯೇ ಕೂಗುತ್ತ ಕೂಗುತ್ತ ತಮ್ಮನ ಮೃತದೇಹದ ಮೇಲೆ ಹರಿಸಿಂಗ್ ಮೂರ್ಛೆ ಹೋದನು.

---

# ಹುಚ್ಚನ ಹಂಬಲು

ಸಾಮಿ ಎಂ. ಎ. ಪರೀಕ್ಷೆಗೆ ಹಣ ಕಟ್ಟುವ ಮೊದಲು ಗುಂಡಪ್ಪನವರು ಮಗಳನ್ನು ಕರೆದುಕೊಂಡು ಹೋದದ್ದು; ಚೆನ್ನಕ್ಕ ಇನ್ನೂ ತವರುಮನೆಯಲ್ಲಿಯೇ ಇದ್ದಳು. ರಾಮಶಾಸ್ತ್ರಿಗಳಾಗಲಿ ರಂಗಸಾಮಿಯಾಗಲಿ 'ನಿಮ್ಮ ಮಗಳನ್ನು ಕಳಿಸಿಕೊಡಿ ಎಂದು' ಒಂದು ಕಾಗದವನ್ನೂ ಬರೆದಿರಲಿಲ್ಲ. ಗುಂಡಪ್ಪನವರೇನೋ ತೀರ ಬಡವರೇ. ಆದರೂ ಹೆತ್ತ ಮಗಳು ಹೊರೆಯೇ? ಎಷ್ಟು ದಿವಸವಾದರೂ ಸರಿಯೆ, ಬೀಗರಿಂದ ಕಾಗದ ಬಾರದೆ ಮಗಳನ್ನು ಕಳಿಸಿಕೊಡುವುದಿಲ್ಲವೆಂಬುದಾಗಿ ನಿಶ್ಚಯಮಾಡಿದರು; ಹಾಗೆಯೇ ಕಳಿಸಿಕೊಡುವುದು ಮಾನಕ್ಕೆ ಕಡಮೆಯೆಂದು ಹೆಂಡತಿಯೂ ಹೇಳಲು ಗುಂಡಪ್ಪನವರ ನಿಶ್ಚಯ ಹಠವಾಯಿತು.

ಮಾವನವರಾಗಲಿ, ಯಜಮಾನರಾಗಲಿ ಕರೆದು ಕಾಗದ ಬರೆಯುವುದಿಲ್ಲ; ಅಪ್ಪ ಅಮ್ಮ ಕರೆಯದೆ ಕಳಿಸಿಕೊಡುವುದಿಲ್ಲ. ಈ ಮಧ್ಯೆ ಚೆನ್ನಕ್ಕನ ಗತಿ? ದೇವರೇ ಗತಿ! ಯಜಮಾನರಿಗೆ 'ಸೆಕಂಡ್ ಕ್ಲಾಸ್'ನಲ್ಲಿ ಬೇರೆ ಪ್ಯಾಸಾಗಿದೆ; ವರ್ಷದ ಹಿಂದೆ ಮೊದಲನೆಯ ಸಲ ಅತ್ತೆಯ ಮನೆಗೆ ಹೋದಾಗ ಸಾಮಿಯ ಸಹವಾಸದ ಸವಿಯನ್ನು ಬೇರೆ ನೋಡಿದ್ದಳು. ಗಂಡನಿಂದ ಅಗಲಿ ಏಳೆಂಟು ತಿಂಗಳಾಗಿವೆ, ಅಷ್ಟೆ ಸಾಲದೆ? ಚೆನ್ನಕ್ಕನ ಭಾಗಕ್ಕೆ ಅದು ಏಳೆಂಟು ವರ್ಷಗಳು.

ಗಂಡನ ಮನೆಯಲ್ಲಿದ್ದಾಗ ತವರುಮನೆಯ ಕಡೆಗೇ ಅವಳ ಮನಸ್ಸು ಒಲೆಯುತ್ತಿತ್ತು. ಅತ್ತೆ ಮಾವ ಎಷ್ಟೇ ಒಳ್ಳೆಯವರಾಗಲಿ, ಗಂಡ ಎಷ್ಟೇ

ಪ್ರಿಯನಾಗಿರಲಿ, ಮೊದಲನೆಯ ಸಲ ಗಂಡನ ಮನೆಗೆ ಹೋದಾಗ ಯಾವ ಹೆಣ್ಣುಮಗಳಿಗೆ, ತಾಯಿಯ, ತವರಿನ ಹಂಬಲಾಗುವುದಿಲ್ಲ? ಚೆನ್ನಕ್ಕನಿಗೂ ಹಾಗಾಯಿತು. ರೋಗಿ ಬಯಸಿದ್ದೂ ಹಾಲನ್ನ, ವೈದ್ಯ ಹೇಳಿದ್ದೂ ಹಾಲನ್ನ. ಗುಂಡಪ್ಪನವರೇ 'ಮಗಳನ್ನು ಕಳಿಸಿಕೊಡಿ ಒಂದೆರಡು ದಿನ' ಎಂದು ಬೀಗರನ್ನು ಕೇಳಿದರು; ರಂಗಸ್ವಾಮಿಯ ಪರೀಕ್ಷೆ ಹತ್ತಿರವಾಗುತ್ತಾ ಬಂದಿತ್ತು; ರಾಮಶಾಸ್ತ್ರಿಗಳು ಒಡಲು ಮಾತನಾಡದೆ ಸೊಸೆಯನ್ನು ಕಳಿಸಿಕೊಟ್ಟರು. ಸ್ವಾಮಿಯೂ ಬೇಡ ಎನ್ನಲಿಲ್ಲ. ಚೆನ್ನಕ್ಕ ಹಿಗ್ಗುತ್ತಲೇ ತಾಯಿಯ ಮನೆಗೆ ಬಂದಿದ್ದಳು.

ತವರುಮನೆಯ ಸುಖವನ್ನೂ ಸವಿದದ್ದಾಯಿತು. ಮನಸ್ಸು ಕೂಡಿದವನ ಕಡೆಗೆ ಹರಿಯಿತು. ಗಂಡನ ಮನೆ ಬಿಟ್ಟು ಬಂದು ಆಗಲೇ ಎಷ್ಟೊಂದು ಕಾಲವಾಯಿತು!—ಎಂದೆನಿಸಿತು ಅವಳಿಗೆ. ಅಗಲಿಕೆಯ ನೋವೂ ಸ್ವಲ್ಪ ತೋಚಿತು; ಇನ್ನೇನು ನಮ್ಮೂರು ಸಿಕ್ಕಿತು ಎನ್ನುವಾಗ ಪ್ರಯಾಣದ ಆಯಾಸ ಎಲ್ಲೋ ಓಡಿ ದಾರಿಯಲ್ಲಿ ಹಿಂದಿರುಗುವಂತೆ, ಇನ್ನೇನು ಸದ್ಯದಲ್ಲಿಯೇ ಕಾಗದ ಬರುತ್ತದೆ, ಗಂಡನ ಮನೆಗೆ ಹೋಗುತ್ತೇನೆ—ಎಂಬ ಬಯಕೆಯ ಬಿಂಬ ಬೆಳೆದಂತೆಲ್ಲಾ ಆ ತುಸು ನೋವೂ ಎಲ್ಲೋ ಮಾಯವಾಯಿತು.

ಬಯಕೆಯ ಫಲದಲ್ಲಿರುವುದಕ್ಕಿಂತಲೂ ಬರಿಯ ಬಯಕೆಯಲ್ಲಿಯೇ ಸುಖ ಹೆಚ್ಚು. ಮಾವಿನಹಣ್ಣನ್ನು ತಿನ್ನುವುದಕ್ಕಿಂತಲೂ ಅದನ್ನು ತಿನ್ನಬೇಕೆಂದು ಎರಡು ತಿಂಗಳ ಮುಂಚೆಯೇ ಬಯಸಿ ಬಯಸಿ ಬಾಯಿಬಿಡುತ್ತಿರುತ್ತೇವೆಯಲ್ಲ, ಆ ನಲ್‌ಬಯಕೆಯಲ್ಲಿಯೇ ಮಾಧುರ್ಯವಿರುಗಿಲು. ಹಾಗೆಂದ ಮಾತ್ರಕ್ಕೆ ಮಾವಿನ ಹಣ್ಣಿನಲ್ಲಿ ಮಾಧುರ್ಯವಿಲ್ಲವೆಂದಲ್ಲ. ಈ ನುಡಿಗಳಿಗೆ ಚೆನ್ನಕ್ಕನೇ ಸಮರ್ಥನೆ: ಬಯಕೆಯ ಸವಿ ಅವಳ ಅಗಲಿಕೆಯ ನೋವನ್ನೂ ಮರೆಸಿತ್ತು.

ಈ ಏಳೆಂಟು ತಿಂಗಳಲ್ಲಿ ರಂಗಸ್ವಾಮಿ ತನಗೆ ಒಂದೇ ಕಾಗದ ಬರೆದಿದ್ದ—ಅದು ಅವನಿಗೆ ಪ್ಯಾಸಾದಾಗ. ಅದರಲ್ಲಿಯೂ ಹೆಚ್ಚಾಗಿ ಏನೂ ಬರೆದಿರಲಿಲ್ಲ. 'ಚೆನ್ನೂ, ನನಗೆ ಪ್ಯಾಸಾಯಿತು—ನಿನ್ನ ಪುಣ್ಯದಿಂದ. ಸದ್ಯದಲ್ಲಿಯೇ ಒಂದು ದೊಡ್ಡ ಕೆಲಸ ಸಿಕ್ಕಿದರೂ ಸಿಕ್ಕಬಹುದು. ಸೆಕಂಡ್ ಕ್ಲಾಸಿನಲ್ಲಿ ಪ್ಯಾಸಾಗಿದೆ,

ಸಿಕ್ಕಿದರೂ ಸಿಕ್ಕೀತೆ. ಯಾಕೆ ಸಿಕ್ಕಬಾರದು ?—ಎಲ್ಲಾ ನಿನ್ನ ಪುಣ್ಯ!....' ಇದೊಂದು ಕಾಗದದ ಹೊರತು ಅವನು ಮತ್ತೆ ಬರೆಯಲೇ ಇಲ್ಲ.

ಚೆನ್ನಕ್ಕ ಆದರ್ಶಜೀವಿ. ತನ್ನ ಪುಣ್ಯದಿಂದ ಗಂಡನಿಗೆ ಒಂದು ದೊಡ್ಡ ಪದವಿ ದೊರೆತೇ ದೊರೆಯುತ್ತೆ, ಅಂದು ಗಂಡನೊಡನೆ ಚಿಕ್ಕಪುಟ್ಟ ಸಂಸಾರ ಹೂಡಿಕೊಂಡು ಹೇಗೆ ಬಾಳಬಹುದು, ಎಷ್ಟು ಚೆನ್ನಾಗಿರುತ್ತೆ...... ಎಂಬ ಈ ಆದರ್ಶಪ್ರಪಂಚದಲ್ಲಿ ಜೀವಿಸುತ್ತಿದ್ದ ಚೆನ್ನಕ್ಕನಿಗೆ ಗಂಡ ಕಾಗದ ಬರೆಯದೆ ಇದ್ದುದಕ್ಕಾಗಿ ಅಸಮಾಧಾನಗೊಳ್ಳುವುದಕ್ಕಾಗಲಿ ಕೋಪಗೊಳ್ಳುವುದಕ್ಕಾಗಲಿ ಕಾರಣ ತೋರಲಿಲ್ಲ, ಸಮಯವೂ ಇರಲಿಲ್ಲ. ಅವಳಿಗೆ ಇನ್ನೊಂದು ಸಮಾಧಾನ : ಇಷ್ಟಕ್ಕೂ ಕಾಗದ ಬರೆಯದಿದ್ದರೇನು ? ಒಲಿದ ಹೃದಯಗಳು ಎಷ್ಟೇ ದೂರವಿರಲಿ, ಕಾಗದಗಳ ಸಹಾಯವಿಲ್ಲದೆ ತಮಗೆ ತಾವೇ ಮಾತನಾಡಿ, ಕೂಡಿ, ನಲಿಯಲಾರವೆ? ತನ್ನ ಮನಸ್ಸೆಲ್ಲಾ ಸ್ವಾಮಿಯೆ, ಅವನ ಮನಸ್ಸಿನಲ್ಲಿಯೂ ತಾನೇ ತಾನು—ಇನ್ನು ಕಾಗದಗಳೇಕೆ! ಕಾಗದ ಬರೆಯುವ ಆವಶ್ಯಕತೆಯಿಲ್ಲ—ಕೆಲಸ ಸಿಕ್ಕಿದಾಗ ತನಗೆ ಬರೆಯದೆ, ತನ್ನನ್ನು ಕರಸಿಕೊಳ್ಳದೆ ಇರುತ್ತಾನೆಯೇ! ಪ್ರಣಯಪ್ರಪಂಚಕ್ಕೆ ತಾನಾಗಿಯೇ ಹಾರಿಹೋಗಬಲ್ಲವಳಾಗಿದ್ದಳು ಚೆನ್ನಕ್ಕ, ಅವಳಿಗೆ ಪ್ರಣಯಪತ್ರದ ರೆಕ್ಕೆ ಬೇಕಿರಲಿಲ್ಲ.

ಹೀಗಿರಲು, ಕೊನೆಗೆ ಕಾಗದವೂ ಬಂದಿತು. ಆದರೆ ಸ್ವಾಮಿಯಿಂದಲ್ಲ, ಮಾವನವರಿಂದ—'....ಸೊಸೆಯನ್ನು ಕಳಿಸಿಕೊಡಿ. ತಾವೇ ದಯವಿಟ್ಟು ಒಂದು ಹೆಜ್ಜೆ ಬಂದು ಮಗಳನ್ನು ಕರೆದುಕೊಂಡು ಬಂದು ಬಿಟ್ಟರೆ ಬಹಳ ಉಪಕಾರ ಮಾಡಿದಂತಾಗುತ್ತೆ...ನಾನು ಬರಲಾಗುವುದಿಲ್ಲ, ತಮಗೆ ತಿಳಿದೇ ಇದೆ. ಸ್ವಾಮಿಯೂ ಬರುವಂತಿಲ್ಲ. ನನ್ನ ಕೋರಿಕೆಯನ್ನು ಖಂಡಿತ ಖಾಲಿ ಮಾಡಬೇಡಿ. ತೊಂದರೆಯನ್ನು ಕ್ಷಮಿಸಿ....'

ಕಾಗದ ಕಂಡೊಡನೆಯೇ ಚೆನ್ನಕ್ಕನ ಬಯಕೆಯ ಮರಿಹಕ್ಕಿ ಗರಿಕೂಡಿ ಬಾನಿಗೇರಿತು. ಅವಳು ತನ್ನ ಅನಿರ್ವಚನೀಯವಾದ ಸುಖ-ಸಂತೋಷದ ಪರಮಾವಧಿಯನ್ನು ಮುಟ್ಟಿದಳು. ಆದರೆ-ಆದೇಕೆ, ಸ್ವಾಮಿ ಬರುವಂತಿಲ್ಲ. ಮೈಗೆ ಸರಿಯಿರಲಿಲ್ಲವೇನೋ. ಮೈಗೆ ಸರಿಯಿಲ್ಲದೆ ಏನು, ಅದಲ್ಲ. ಅಷ್ಟು ಕಾಲ ಕಾದದ್ದಕ್ಕೆ ಸ್ವಾಮಿಗೆ ಭಾರಿ ಕೆಲಸ ಸಿಕ್ಕಿರಬೇಕು. ಕೆಲಸ ಸಿಕ್ಕಿದ

ಕ್ಕೂಡಲೆ ಹೆಂಡತಿ ಕರೆದುಕೊಂಡು ಬರಬೇಕೆಂದು ರಜಾ ಕೇಳಿದರೆ ಕೊಡು ತ್ತಾರೆಯೇ, ಅಥವಾ ಕೇಳುವುದಾದರೂ ಚೆನ್ನಾಗಿರುತ್ತದೆಯೋ. ಅದು ಹೋಗಲಿ—ಕೆಲಸ ಸಿಕ್ಕಿದರೆ ಸಂತೋಷ ಸಮಾಚಾರ ತಿಳಿಸದೆ ಇರುತ್ತಾ ರೆಯೆ? ಎಲ್ಲೋ ಕಡಮೆ ಸಂಬಳ ಇರಬೇಕು, ಅದನ್ನೇನು ಮಹಾ ತಿಳಿಸು ವುದು ಎಂದು ಅದರ ವಿಷಯ ಎತ್ತಿಲ್ಲದೆ ಇರಬಹುದು. ಅವಳಿಗೆ ಯಾವುದೂ ಬಗೆಹರಿಯಲಿಲ್ಲ. ಅನೇಕ ಚಿತ್ರಗಳನ್ನು ಕಲ್ಪಿಸಿಕೊಂಡಳು—ಒಂದೇ ಚಿತ್ರ ಅವಳ ಚಿತ್ತಭಿತ್ತಿಯಲ್ಲಿ ಮುದ್ರೆಯೊತ್ತಿದಂತೆ ನಿಂತದ್ದು :

ಕೋಟು ಪೇಟ ಹಾಕಿಕೊಂಡು ಸಾಮಿ ಸ್ಕೂಲಿಗೆ ( ಸ್ಕೂಲೋ ಆಫೀಸೋ, ಅವಳ ಕಲ್ಪನೆಯಲ್ಲಿ ಎರಡೂ ಒಂದೇ ) ಹೋಗುವ ಆವಸರ ದಲ್ಲಿದ್ದಾನೆ.

' ಬೇಡವೇ....? ' ಎಂದು ಚೆನ್ನಕ್ಕ ರೂಮಿನ ಬಾಗಿಲಲ್ಲಿ ನಿಂತು ಮೆಲ್ಲನೆ ಮುಗುಳ್ನಗೆಯೊಡನೆ ಕೇಳುತ್ತಾಳೆ.

ಸಾಮಿಗೆ ಗೊತ್ತಾಗಲಿಲ್ಲವೋ, ಇಲ್ಲದೆ ಹೋದರೆ ಹಾಗೆ ನಟಿಸಿ ದನೋ—' ಏನೂ ? ' ಎಂದ.

' ಏನಾದರೂ ಆಗಲಿ, ಒಳಕ್ಕೆ ಬರಬಾರದೆ ? ' ನಗೆಮುಗುಳು ಅರಳಿತು. ರೂಮಿನ ಬಾಗಿಲು ಮುಚ್ಚಿತು; ಮತ್ತೆ, ಒಂದೇ ನಿಮಿಷದಲ್ಲಿ ತೆರೆಯಿತು.

' ಎಲೆಯಡಿಕೆ ಬೇಡವೇ ಅಂದ್ರೆ ? '

' ಹೊತ್ತಾಯಿತೂ. .ಎಲೆಯೂ ಬೇಡ, ಅಡಿಕೆಯೂ ಬೇಡ. ಅದರ ಬದಲು, ದಿನಾಲೂ ಇದನ್ನೆ ಕೊಡುತಾ ಇರು, ಸಾಕು ' ಎಂದು ಹೇಳಿ, ಸಾಮಿ ಅವಳ ಗಲ್ಲ ಹಿಡಿಯಲು—

' ಥೂ ಬಿಡಿ ಅಂದ್ರೆ ' ಎಂದು ಬುಸುಗುಟ್ಟಿದಳು ಚೆನ್ನಕ್ಕ.

' ಬಿಟ್ಟೆ ' ಎಂದು ಸಾಮಿ ಹೊರಟೇಹೋದ.

ಆಮೇಲೆ, ' ಥೂ ಬಿಡಿ ಅಂದ್ರೆ ' ಎನ್ನಬಾರದಾಗಿತ್ತು ಎಂದೆನಿಸಿತು ಆವಳಿಗೆ. ಬಾಯಿಸ ಬಳಿಗೆ ಬಂದ ಇನ್ನೊಂದು ಸಪಿಬಟ್ಟಲನ್ನು ಕೈಯಿಂದ ಸೂಕಿದೆನಲ್ಲಾ ಎಂದು ಮರುಗಿದಳು.

ಒಡನೆಯೇ ಚೆನ್ನಕ್ಕ ತನಗೆ ತಾನೇ ನಕ್ಕಳು; ಕಲ್ಪನೆಯಲ್ಲಿ ' ಥೂ ಬಿಡಿ ' ಎಂದ ಮಾತ್ರಕ್ಕೆ ಮಿಂಚಿ ಹೋದದ್ದೇನು ? ಮೈಸೂರಿಗೆ ಹೋಗು

ವುದು ಇನ್ನೆರಡು ದಿನ ಮಾತ್ರ, ಈ ಕನಸು ನನಸಾಗುವುದೆಂದು. ಆಗ ಎಚ್ಚರಿಕೆಯಿಂದಿದ್ದರೆ ಸರಿ!

*   *   *   *

ಮನೆಯವರೆಲ್ಲರೂ ಸೊಸೆಯ ಬರವನ್ನೇ ನಿರೀಕ್ಷಿಸುತ್ತಿದ್ದಾರೆ. ಸಾಮಿಯಂತೂ ಬೀದಿಯಲ್ಲಿ ಯಾವ ಟಾಂಗಾಗಾಡಿಯ ಸದ್ದಾದರೂ– 'ಹೆಂಡ್ತಿ ಬಂದಿಲ್ಲ, ನನ್ನ ಹೆಂಡ್ತಿ ಬಂದಿಲ್ಲ..ಚೆನ್ನೂ! ಚೆನ್ನೂ! ನನ್ನ ಮುದ್ದಿನ ಚೆನ್ನೂ' ಎಂದು ಬೀದಿಯ ಬಾಗಿಲಿಗೆ ಓಡಿಹೋಗುತ್ತಾನೆ. ರಾಮಶಾಸ್ತ್ರಿಗಳಿಗೂ ಒಮ್ಮೊಮ್ಮೆ ಅವನನ್ನು ತಡೆಯುವುದಕ್ಕೆ ಅಸಾಧ್ಯ ವಾಗುತ್ತಿತ್ತು.

ಹೆಂಡತಿಗಾಗಿ ಎಷ್ಟು ಹಂಬಲಿಸುತ್ತಿದ್ದಾನೆ, ಹಾತೊರೆಯುತ್ತಿದ್ದಾನೆ ಸಾಮಿ! ತನ್ನ ಕನಸಿನ ಮೂರ್ತಿಯನ್ನು ಕಂಡು ಎಷ್ಟು ಹಿಗ್ಗುವಳೋ ಚೆನ್ನಕ್ಕ! ಮುಂದಾಗಿ ತನ್ನ ಮನಸನ್ನಾಗಲೇ ಅವಳು ಕಳಿಸಿರಬೇಕು ಮನದನ್ನನನ್ನು ಕಾಣುವುದಕ್ಕೆ! ಒಂದು ಸೇರುವುದೊಂದೇ ಉಳಿದಿರು ವುದು; ಬಂದೊಡನೆಯೇ ಹಿಗ್ಗಿ ಹಿಗ್ಗಿ ಹಾರಿ ಕುಣಿದು ಅವಳನ್ನು ಬಿಗಿಯಪ್ಪಿ ಅವಳಿಗೆ ಸ್ವಾಗತ ಬಯಸಲು ಸಾಮಿ ಕಾತರದಿಂದ ಕಾದಿದ್ದಾನೆ.

ಹೆಂಡತಿ ಬರುವುದಕ್ಕೆ ಮುಂಚೆಯೇ ಸಾಮಿ ಹೀಗೆ ಕುಣಿದಾಡುತ್ತಿ ದ್ದಾನೆ—ಅವಳನ್ನು ಕಾಣುವ ಉತ್ಸಾಹದ ಔತ್ಕಂಠ್ಯವೆಷ್ಟಿರಬೇಕು!

ಸಾವಿತ್ರಮ್ಮನವರು ಮಗನ ಸ್ಥಿತಿಯನ್ನು ನೋಡಿ ಮನಸ್ಸಿನಲ್ಲಿಯೇ ಕೊರಗಿದರು; ಹೆತ್ತತಾಯಿ ಆ ಸಂಕಟವನ್ನು ಎಷ್ಟು ಹೊತ್ತು ಹಾಗೆಯೇ ನುಂಗಿಕೊಂಡಿರಬಲ್ಲಳು? ಕಣ್ಣೀರು ಮಿಡಿದರು.

ರಾಮಶಾಸ್ತ್ರಿಗಳದನ್ನು ಕಂಡು ಸಮಾಧಾನಪಡಿಸಿದರು. 'ಸುಮ್ಮನೆ ಏಕೆ ಕೊರಗುತ್ತೀಯೆ? ಅವನಿಗೀಗ ಹೆಂಡತಿಯ ಮೇಲಿನ ಹುಚ್ಚು ಹಿಡಿದಿದೆ. ಚೆನ್ನು ಬಂದರೆ ಎಲ್ಲಾ ಸರಿಹೋಗುತ್ತೆ. ಅವರು ಬರೆದಿರುವಂತೆ ಗುಂಡಪ್ಪನವರು ಈಗಿನ ರೈಲಿಗೆ ಬಂದರೂ ಬಂದರೆ.'

ಸಾವಿತ್ರಮ್ಮನವರು ಕಣ್ಣೀರನ್ನು ಸೆರಗಿನ ಕೊನೆಯಿಂದ ಒರಸಿ ಕೊಳ್ಳುತ್ತಾ—

'ಹಾಗಾದರೆ ಬದನೆಕಾಯಿನ್ನಾದರೂ ತರಬಾರದೆ, ಒಂದಿಷ್ಟು ಹುಳಿ ಮಾಡುತ್ತೀನಿ?' ಎಂದರು.

'ಸರಿ, ಹುಳಿಯೂ ಬೇಡ ಪಳಿಯೂ ಬೇಡ. ನಾನು ಹೊರಕ್ಕೆ ಹೋದರೆ ಇವನನ್ನು ನೀನು ತಡೆಯುತ್ತೀಯ? ತೆಂಗಿನ ಕಾಯಿ ಇದ್ದರೆ ಒಡೆದು ಚಟ್ಣಿಮಾಡು, ಸಾಕು' ಎಂದು ನುಡಿದರು..

ಬೆಂಗಳೂರು ರೈಲು ಬರುವ ಹೊತ್ತಾಗಿತ್ತು. ರಾಮಶಾಸ್ತ್ರಿಗಳು ಹೇಗೋ ಅವಸರಸಲ್ಲಿ ಸ್ನಾನಸಂಧ್ಯಾವಂದನೆಯ ಶಾಸ್ತ್ರಮಾಡಿ ಸಾಮಿಯ ಹತ್ತಿರದಲ್ಲಿಯೇ ಕುಳಿತಿದ್ದರು. ಸಾವಿತ್ರಮ್ಮನವರೂ ಅಡಿಗೆ ಮಾಡಿ ಕಾದು ಕೊಂಡು ಕುಳಿತಿದ್ದರು.

ಬೀದಿಯಲ್ಲಿ ಒಂದು ಟಾಂಗಾಗಾಡಿ ಬರುತ್ತಿರುವ ಸದ್ದು ಕೇಳಿತು. ಸಾಮಿ ಮೊದಲಿನ ಪಲ್ಲವಿಯನ್ನು ಹಾಡಿಕೊಂಡು ಕುಣಿಯುತ್ತಾ ಮೇಲ ಕ್ಕೆದ್ದ. ಶಾಸ್ತ್ರಿಗಳು ಅವನ ರಟ್ಟೆಹಿಡಿದು ಕೆಳಗೆ ಕೂರಿಸಿಕೊಂಡರು—ಬಹಳ ಶ್ರಮದಿಂದ ಕೂರಿಸಿಕೊಂಡೇ ಇದ್ದರು.

ಮನೆಯ ಬಾಗಿಲಿನ ಹತ್ತಿರವೇ ಗಾಡಿಯ ಸದ್ದು ನಿಂತಿತು. ಗುಂಡಪ್ಪ ನವರು ಮಗಳನ್ನು ಕರೆದುಕೊಂಡು ಮನೆಯಂಗಳಕ್ಕೆ ಬಂದರು. ಚೆನ್ನಕ್ಕ ಮೊದಲೇ 'ಚೆನ್ನು;' ಇಂದು ಮುಖ ಗೆಲವುಗೂಡಿ ಅವಳು ಮತ್ತೂ ಚೆನ್ನಾ ಗಿದ್ದಳು; ಮುಖದಲ್ಲಿ ನಗೆ ನಿಲ್ಲದೆ ನಾಟ್ಯವಾಡುತ್ತಿತ್ತು.

ಅವರು ಮನೆಯೊಳಕ್ಕೆ ಬಂದರು.

ಸಾಮಿ ತಂದೆಯ ತಡೆಯನ್ನು ಲೆಕ್ಕಿಸದೆ ಮೊಸಲಿನಂತೆ ಕಿರಿಚುತ್ತ ಮೇಲಕ್ಕೆದ್ದ, ಹೆಂಡತಿಯನ್ನು ಬಾಚಿ ತಬ್ಬಿಕೊಳ್ಳುವುದಕ್ಕೆ ಎಂಬಂತೆ ಮೇಲ ಕ್ಕೆದ್ದ. ಗಂಡನ ಈ ವಿಚಿತ್ರವರ್ತನೆಯನ್ನು ನೋಡಿ ಬಾಲೆ ಬೆರಗಾದಳು, ಬೆದರಿದಳು, ತಂದೆಯನ್ನಪ್ಪಿಕೊಂಡಳು.

ಏನೋ ನಿರಾಶೆಗೊಂಡವನಂತೆ ಸಾಮಿ ಇದ್ದಕ್ಕಿದ್ದಂತೆ ನಿಶ್ಚೇಷ್ಟಿತ ನಾಗಿ ಚಾಪೆಯ ಮೇಲೆ ಬಿದ್ದುಕೊಂಡನು.

ಶಾಂತವಾಗಿದ್ದ, ಗಂಭೀರವಾಗಿದ್ದ, ಪ್ರೇಮಪೂರಿತವಾಗಿದ್ದ ಬಾಲೆಯ ಬಗೆಗಡಲಿನ ಮೇಲೆ ಅನಿರೀಕ್ಷಿತವಾದ, ಅವ್ಯಾಹತವಾದ ದೊಡ್ಡದೊಂದು ಬಿರುಗಾಳಿ ಬೀಸಿ, ಬಗೆಯನ್ನು ಕದಡಿ ಅಲ್ಲೋಲಕಲ್ಲೋಲವನ್ನಾಗಿ

ಮಾಡಿತು. ಅವಳ ಹೃದಯ ಅದೇ ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತಾಯಿತು.

ಗಂಡನ ಪರಿಯನ್ನು ಕಂಡು ಹೆದರಿರುವಳೆಂದು ಎಲ್ಲರೂ ಅರಿತರು; ಆದರೆ ಅವಳ ಅಂತರಂಗದ ನಿಜವಾದ ಸ್ಥಿತಿ ಯಾರಿಗೂ ಗೊತ್ತಾಗಲಿಲ್ಲ.

'ಚೆನ್ನು, ಸುಮ್ಮನಿರು; ಧೈರ್ಯ ತಂದುಕೊ' ಎಂದು ಗುಂಡಪ್ಪನವರು ಮಗಳನ್ನು ಸಮಾಧಾನಪಡಿಸಿದರು.

ಎಲ್ಲರೂ ಊಟಕ್ಕೆ ಕುಳಿತಿದ್ದಾರೆ. ರಾಮಶಾಸ್ತ್ರಿಗಳು ಒಂದು ವಿಧವಾದ ಗಟ್ಟಿಮನಸ್ಸಿನಿಂದ ತುತ್ತುನುಂಗುತ್ತಿದ್ದರು. ಗುಂಡಪ್ಪನವರು ಊಟದ ಶಾಸ್ತ್ರ ಮಾಡುತ್ತಿದ್ದರು. ಚೆನ್ನು ಮೌನವಾಗಿದ್ದಳು, ಬಡಿಸಿದ್ದು ಒಡಿಸಿದಂತಿತ್ತು.

'ಚೆನ್ನು, ಊಟಮಾಡಮ್ಮ....ಏನೂ ಹೆದರಿಕೆಯಿಲ್ಲ. ನನ್ನ ಕೈಲಾದದ್ದು ಮಾಡುತೀನಿ. ಇರೋನೊಬ್ಬನೇ ಮಗ; ನೀನು ಮಗಳಿಗಿಂತ ಹೆಚ್ಚಮ್ಮ....ಗುಂಡಪ್ಪನವರೇ, ನೀವಾದರೂ ಸ್ವಲ್ಪ ಹೇಳಿ' ಎಂದು ಹೇಳಿದರು ರಾಮಶಾಸ್ತ್ರಿಗಳು.

ಸಾವಿತ್ರಮ್ಮನವರು ಅಡಿಗೆಯ ಮನೆಯ ಬಾಗಿಲಿನಲ್ಲಿ ನಿಂತು, ಸೆರಗಿನ ಕೊನೆಯಿಂದ ಕಣ್ಣೀರೊರಸಿಕೊಳ್ಳುತ್ತ—

'ಏನಾದರೂ ಕೆಲಸ ಸಿಕ್ಕದೆ ಅದೇ ನೆವನಾಗಿ ಅವನಿಗೆ ಬುದ್ಧಿಭ್ರಮಣೆಯಾಗಿ ಹೋಗಿದೆ. ಹೆಂಡತಿ ನೋಡಬೇಕೂ ಅಂತ ಹಂಬಲಿಸುತಾ ಇದ್ದ. ಅವಳೂ ಬಂದ ಹಾಗಾಯಿತು. ಚೆನ್ನು ಪುಣ್ಯದಿಂದ ಅವನ ಬುದ್ಧಿ ಸೆಟ್ಟಗಾಗಬೇಕು' ಎಂದು ಗುಂಡಪ್ಪನವರನ್ನು ಸಂಬೋಧಿಸಿ ನುಡಿದರು.

ಗುಂಡಪ್ಪನವರು ಏನು ಹೇಳುತ್ತಾರೆ, ಪಾಪ. ಯಾವ ಮಾತಿಗೂ ಮರುಮಾತಾಡದೆ ಸುಮ್ಮನಿದ್ದರು.

ಸಾಮಿ ಕಣ್ಣುಮುಚ್ಚಿಕೊಂಡು ಚಾಪೆಗೆ ಅಡ್ಡಡ್ಡನಾಗಿ ಇನ್ನೂ ಮಲಗಿದ್ದ. ಆದರೂ ಕನಸಿನಲ್ಲಿ ಮಾತನಾಡುತ್ತಿರುವಂತೆ ಮಾತನಾಡುತ್ತಿದ್ದ! 'ಓಹ್ಹೋಹೊ! ಎಂ. ಎ. ಪ್ಯಾಸು ಮಾಡಲಿಲ್ಲವೆ! ಬಿಟ್ಟಿ ಬಿಸಾಕ್ಹೋಯ್ತು! ಕೆಲ್ಸ ಕೊಡೋಕೇನಾಗಿತ್ತು? ಅವರಪ್ಪನ ಮನೆ ಗಂಟೆ! ಹಹ್ಹಹ! ಬೇಕಾದೋರಿಗೊಂದು, ಬೇಡದವರಿಗೊಂದು! ಹೊಹ್ಹೋಹೋ!

ಸೂಳೇಮಕ್ಕಳು ಕೊಡದೆ ಹೋದರೆ ಹೋಗಲಿ. ಮನೇಲೇ ಇರ್ತೀನಿ, ಸದಾ ಚೆನ್ನೂಮುಂದೆ ಕೂತಿರ್ತೀನಿ. ಅವಳೇ ಕೆಲ್ಸ ಕೊಡ್ತಾಳೆ. ಅಹ್ಹಹ! ಕೊಡದೆ ಏನು, ಕೆಲ್ಸ ಕೊಟ್ಟೇಕೊಡ್ತಾಳೆ, ಭಾರಿ ಕೆಲ್ಸ ಕೊಡ್ತಾಳೆ. ಚೆನ್ನೂ, ಚೆನ್ನೂ! ನನ್ನ ಚೆನ್ನು, ಚೆನ್ನೂ. ಹಹ್ಹಹ!' ಎಂದು ಗಹಗಹಿಸಿ ನಗಲಾರಂಭಿಸಿದನು.

'ಅಯ್ಯೋ ದೇವರೆ! ಅಳಬೇಕೋ ನಗಬೇಕೋ' ಎಂದು ಗುಂಡಪ್ಪನವರು ತಮಗೆ ತಾವೇ ಅಂದುಕೊಂಡು ಉತ್ತರಾಪೋಶನ ತೆಗೆದುಕೊಂಡರು.

ಚೆನ್ನು ಬಂದದ್ದಾಯಿತು; ತನ್ನ ಅತ್ಯಾಶೆಯ ವಿಷಫಲವನ್ನು ಭುಂಜಿಸಿದ್ದಾಯಿತು. ಇನ್ನು ಅದರ ಫಲವೆಂತೊ?

ಚೆನ್ನು ಬಂದು ಆಗಲೇ ಎಳೆಂಟು ದಿವಸಗಳಾದುವು. ಗುಂಡಪ್ಪನವರು ಗಟ್ಟಿಮನಸ್ಸುಮಾಡಿಕೊಂಡು ಮಗಳೊಬ್ಬಳನ್ನೇ ಬಿಟ್ಟು ಹೊರಟು ಹೋದರು.

ಚೆನ್ನು ಈ ಸ್ಥಿತಿಯಲ್ಲಿ ಏನು ಮಾಡಬಲ್ಲಳು? ಏನೋ ಒಂದು ಬಗೆಯ ಧೈರ್ಯ ತಂದುಕೊಂಡಳು. ಗಂಡನ ಕೂಗಾಟ ಚೀರಾಟಗಳೆಲ್ಲಾ ಅವಳಿಗೆ ಅಭ್ಯಾಸವಾಗುತ್ತ ಬಂದುವು. ಅಭ್ಯಾಸವಾಗಿದ್ದರೂ ಅವಳ ಕಳವಳವೇನೋ ಕಡಮೆಯಾಗಿರಲಿಲ್ಲ—ಆದರೆ ಅದನ್ನೆಲ್ಲಾ ಯಾರೊಡನೆ ಹೇಳಿಕೊಳ್ಳಬೇಕು. ಅಪ್ಪನೂ ಇಲ್ಲ, ತನ್ನವರಾಗಿ ಯಾರೂ ಇಲ್ಲ. ಅತ್ತೆಮಾವಂದಿರು ಒಳ್ಳೆಯವರೇ; ಆದರೆ ಅವರೊಡನೆ ಬಾಯಿಬಿಡಲು ಮನಸ್ಸು ಬಾರದು. ತನ್ನ ಅಳಲನ್ನೆಲ್ಲ ನುಂಗಿಕೊಂಡಿದ್ದಳು. ತನ್ನ ಹೃದಯವನ್ನು ದಹಿಸುತ್ತಿದ್ದ ಬೆಂಕಿಯನ್ನು ಅದುಮಿ ಬಚ್ಚಿಡಲು ಸಾಹಸಪಡುತ್ತಿದ್ದಳು.

ಕಣ್ಣೀರಿನ ಕಾಲುವೆಯನ್ನಾದರೂ ಹರಿಸಿದ್ದರೆ ಆ ಬೆಂಕಿ ಸ್ವಲ್ಪವಾದರೂ ಆರುತ್ತಿದ್ದಿತೇನೊ. ಆದರೆ ಒಂದು ಕಂಬನಿಯಾದರೂ ಅವಳ ಕಣ್ಣನ್ನು ಮಬ್ಬುಮಾಡಲಿಲ್ಲ; ಏನೋ ವಿಚಾರಪರತೆಯನ್ನು ಸೂಚಿಸುವ ಹೊಳಪಿತ್ತು ಅವಳ ಕಣ್ಣಿನಲ್ಲಿ; ಒಂದು ಬಗೆಯ ಆಳವಿತ್ತು ಅವಳ ನೋಟದಲ್ಲಿ. ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಮೊದಲ ಸಲ ಬಂದಾಗ ಮಾಡಿಕೊಂಡಿದ್ದ ಗೆಳತಿಯರ ಸಹವಾಸವನ್ನೂ ಕೋರಲಿಲ್ಲ.

ಚೆನ್ನು ಬಂದು ಇಪ್ಪತ್ತು ದಿವಸಗಳಾದುವು. ಸಾವಿಯ ಹುಚ್ಚು

ಹೆಚ್ಚುತ್ತಿದ್ದಿತೇ ಹೊರತು ತನ್ನ ಬರವಿನಿಂದ, ತನ್ನ ಸಾನ್ನಿಧ್ಯದಿಂದ ಕಡಮೆಯಾಗುವ ಕುರುಹು ಕೂಡ ತೋರಲಿಲ್ಲ. ತಾನು ಬಂದದ್ದು ಸಾರ್ಥಕವಾಯಿತು' ಎಂದುಕೊಂಡಿರಬೇಕು ಅವಳು. ತಾನು ಅವನ ದುರಿಗೆ ಇಲ್ಲದಿರುವುದೇ ಒಳ್ಳೆಯದಲ್ಲವೆ? ಅವನ ಸ್ಥಿತಿಯನ್ನು ಪ್ರತಿದಿ ಕಣ್ಣಿನಿಂದ ನೋಡುತ್ತಿರುವುದಾದರೂ ಹೇಗೆ? ತಾನು ಮರೆಯಾದರೆ ಹುಚ್ಚೂ ಮರೆಯಾಗಬಹುದಲ್ಲವೆ? ಇಂಥಾ ಭಾವನೆಗಳು ಅವಳ ಮ ನಲ್ಲಿ ಸುಳಿದಿರುವುದು ಅಸಂಭವವಲ್ಲ, ಸುಳಿಯದಿರುವುದು ಅಸಂಭವ.

* * * *

ಇಪ್ಪತ್ತೊಂದನೆಯ ದಿನ... ಮಂಗಳವಾರ....ರಾಮಶಾಸ್ತ್ರಿ ಮನೆಯ ಮುಂದೆ ಜನ ಕಿಕ್ಕಿರಿದು ತುಂಬಿಬಿಟ್ಟಿವಾರೆ.

'ರಂಗಸಾಮಿ ...ಹುಚ್ಚ....ಮನೆಯಲ್ಲಿ ಏನೋ ಅನಾಹುತ ಮ ದ್ದಾನೆ' ಅಂತ ಯಾರೋ ಅಂದರು.

'ಯಾರೋ ಜಗಳ ಅಂತ ಹೇಳಿದರು ಮತ್ತೆ! ನಾನು ಹಿಂದಿನ ಯಿಂದ ಓಡಿ ಬಂದೆ! ಏನೋ ಅಪ್ಪ, ಒಬ್ಬೊಬ್ಬರು ಒಂದೊಂದು ಹ ತಾರೆ!' ಎಂದ ಮತ್ತೊಬ್ಬ.

'ಲೇ ಶಾರದೆ! ಹೋಗಬೇಡ ಅಂದರೆ ಕೇಳುವುದಿಲ್ಲವಲ್ಲ. ನಿ ಏನಾದರೂ ಹುಚ್ಚುಗಿಚ್ಚು ಹಿಡಿಯಬೇಕೋ?' ಎಂದು ಜನರ ಗುಂ ನೋಡುತ್ತ ನಿಂತಿದ್ದ ಹುಡುಗಿಯನ್ನು ಕೂಗಿ ಕರೆದಳು ಒಬ್ಬಾಕೆ.

ಪೋಲಿಸ್ ಇನ್‌ಸ್ಪೆಕ್ಟರ್ ರಾಮಯ್ಯನವರಿಗೂ ಮೊದಲೇನೂ ಗೊ ಗಲಿಲ್ಲ ಸಬ್‌ಇನ್‌ಸ್ಪೆಕ್ಟರ್ ಸುಬ್ಬಯ್ಯನವರು—ಅವರಿಗೂ ವಿಷಯ ಯಾಗಿ ಗೊತ್ತಿಲ್ಲ—ಅತ್ಯಾತುರದಿಂದ ಕರೆದದ್ದರಿಂದ ಬೈಸಿಕಲ್ ಕೊಂಡು ಓಡಿ ಬಂದರು. ಆಮೇಲೆ ವಿಷಯ ಗೊತ್ತಾಯಿತು. ಮಹ ಗಿಹಜರ್ ಮುಂತಾದ ಮಾಮೂಲು ಕೆಲಸವೆಲ್ಲಾ ಸಾಂಗವಾಗಿ ಗಂಡಿತು. ಮೊದಲು ಎಷ್ಟು ಕುತೂಹಲದಿಂದ ಜನಸಂದಣಿ ನೆರೆದಿ ಅಷ್ಟೇ ನಿರಾಶೆಯಿಂದ ಅದು ಕರಗಿಹೋಯಿತು—ಚಿನ ಕ್ಕ ನ ಮರಣವ

ಅಲ್ಲದೆ, ಪೋಲಿಸಿನವರು ' ನಿಮಗೇನ್ರಿ ಇಲ್ಲಿ ಕೆಲ್ಸ ? ಹೆಣ ಹೊರ್ತೀರೇನೂ ? ' ಎಂದು ಗದರಿಸುತ್ತಿದ್ದರು.

ಕೆಲವು ದಿವಸಗಳಾದ ಮೇಲೆ ' ಕನ್ನಡ ನಾಡು ' ಪತ್ರಿಕೆಯಲ್ಲಿ ಒಂದ ವಿಶೇಷವಾರ್ತೆಯೊಂದನ್ನು ಓದಿ ಎಲ್ಲರಿಗೂ ಸಮಾಚಾರ ವಿವರವಾಗಿ ತಿಳಿದು ಸಮಾಧಾನವಾಯಿತು. ಆ ವಿಶೇಷವಾರ್ತೆಯ ಶಿರೋನಾಮ ದಪ್ಪಕ್ಷರದಲ್ಲಿ ಹೀಗಿತ್ತು: ' ಕೆಟ್ಟಮೇಲೆ ಬುದ್ಧಿಬಂತು; ಅಟ್ಟಮೇಲೆ ಒಲೆ ಉರಿಯಿತು ' ವಾರ್ತೆಯಿದು : ' ಮೈಸೂರು ಹಳೆಯ ಅಗ್ರಹಾರದಲ್ಲಿರುವ ರಾಮಶಾಸ್ತ್ರಿ ಗಳ ಸೊಸೆ, ತನ್ನ ಗಂಡನ ಬುದ್ಧಿಭ್ರಮಣೆಯೇ ಕಾರಣವಾಗಿ, ಐದಾರು ದಿವಸಗಳ ಹಿಂದೆ ಮನೆಯ ಹಿತ್ತಿಲ ಬಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿ ಕೊಂಡಳು. ಇದರಿಂದ ಆಕೆಯ ಗಂಡನ ಹುಚ್ಚು ಆ ಕೂಡಲೇ ಇಮ್ಮಡಿ ಯಾಗಲು, ಕೆಟ್ಟಮೇಲೆ ಬುದ್ಧಿಬಂತೆಂಬ ಗಾದೆಗೆ ತಕ್ಕಂತೆ ಮ॥ ರಾಮ ಶಾಸ್ತ್ರಿಗಳು ತಮ್ಮ ಮಗನನ್ನು ಬೆಂಗಳೂರಿನ ಹುಚ್ಚರಾಸ್ಪತ್ರೆಯಲ್ಲಿ ಇಟ್ಟಿ ದ್ದಾರೆ. ಆದದ್ದು ಆಗಿಹೋಯಿತು. ಅಕಾಲಮರಣವನ್ನು ತಂದುಕೊಂಡ ಹುಡುಗಿಯ ಆತ್ಮಕ್ಕೆ ದೇವರು ಶಾಂತಿಯನ್ನು ಕೊಡಲಿ. ವಿದ್ಯಾವಂತರಾದ ಮ॥ ರಂಗಸ್ವಾಮಿ, ಎಂ. ಎ. ಅವರಿಗೆ ಬೇಗ ಗುಣವಾಗಲೆಂದು ದೇವರನ್ನು ಪ್ರಾರ್ಥಿಸುತ್ತೇವೆ. '

ವಿಚಿತ್ರವಾದ ಪ್ರಪಂಚ ! ಹುಚ್ಚನಿಗೂ ಹೆಣ್ಣುಕೊಡಲು ಒಬ್ಬರು ಬಂದರು ! ' ರಾಮಶಾಸ್ತ್ರಿಗಳೆ, ನಾವು ತೀರ ನಿರ್ಗತಿಕರು. ವರಾನ್ವೇಷಣೆ ಯಲ್ಲಿ ನಾವು ಮದುವೆಗೆಂದು ಕೂಡಿಟ್ಟಿದ್ದ ಅಲ್ಪಸ್ವಲ್ಪ ಹಣದ ಗಂಟೂ ಕರಗುತ್ತಿದೆ. ನಾವು ಏನನ್ನೂ ಕೊಡಲಾರೆವು. ಏನನ್ನೂ ಕೊಡದೆ ಈಗಿನ ಕಾಲದಲ್ಲಿ ಗಂಡು ಸಿಕ್ಕುವಂತಿಲ್ಲ. ತಾವು ದೊಡ್ಡಮನಸ್ಸುಮಾಡಿ ನನ್ನ ಮಗಳನ್ನು ತಂದುಕೊಂಡು ಉದ್ಧಾರಮಾಡಬೇಕು. '

ರಾಮಶಾಸ್ತ್ರಿಗಳಿಗೆ ನಗು ಬಂದಿತು. ' ನನ್ನ ಮಗನಿಗೆ ಹುಚ್ಚು ಎನ್ನುವುದು ತಮಗೆ ತಿಳಿಯದೆ ? '

' ತಿಳಿದಿದೆ ಶಾಸ್ತ್ರಿಗಳೆ ! '

' ಹಾಗಾದರೆ ತಿಳಿದೂ ತಿಳಿದೂ ಹುಚ್ಚನಿಗೆ ಹೆಣ್ಣು ಕೊಡುತ್ತೀರ ? ನಿಮಗೆಲ್ಲೊ ಹುಚ್ಚು ! '

'ನನ್ನ ಮಾತು ಸ್ವಲ್ಪ ಕೇಳಿ ಶಾಸ್ತ್ರಿಗಳೆ. ನಾನು ತಿಳಿದೂ ತಿಳಿದೇ, ಬೇಕೆಂದೇ ಹೆಣ್ಣು ಕೊಡಲು ಬಂದೆ. ನಮ್ಮ ಮನಸ್ಸೊಪ್ಪಿ, ಧೈರ್ಯದಿಂದ ನಮ್ಮ ಮಗಳನ್ನು ನಿಮ್ಮ ಮಗನಿಗೆ ಧಾರೆಯೆರೆದು ಕೊಡುತ್ತೇವೆ. ಮದುವೆ ಯಾವರೆ ಖಂಡಿತ ಹುಚ್ಚು ಬಿಟ್ಟುಹೋಗುತ್ತೆ. ನಮ್ಮ ಸೋದರಳಿಯನಿಗೂ ಹೀಗೇ ಆಗಿತ್ತು. ಯಾರೋ ನನ್ನಂಥವರು ಹೆಣ್ಣು ಕೊಟ್ಟಮೇಲೆ ಅವನ ಹುಚ್ಚು ಹಾರಿಹೋಯಿತು. ಅವನನ್ನು ಆಸ್ಪತ್ರೆಯಲ್ಲಿಯೂ ಇಟ್ಟಿರಲಿಲ್ಲ. ನಿಮ್ಮ ಮಗನನ್ನು ಕರೆದುಕೊಂಡು ಬಂದು ಮದುವೆ ಮಾಡಿ. ಖಂಡಿತ ಹುಚ್ಚು ಬಿಡುತ್ತೆ. ಬಡವನ ಮೇಲೆ ದಯಮಾಡಬೇಕು' ಎಂದು ಕಾಲು ಕಾಲಿಗೆ ಬಿದ್ದು ಬೇಡಿಕೊಂಡರು ನಂಜಪ್ಪನವರು.

ರಾಮಶಾಸ್ತ್ರಿಗಳು ವಿವೇಕಿಗಳು, ಶಾಸ್ತ್ರ ಮುಂತಾದ್ದನ್ನು ತಿಳಿದವರು, ಪಾಪ! ನಂಜಪ್ಪನವರಿಗೆ ಗಂಡು ಸಿಕ್ಕದೆ ಅವರು ಬಲು ಪೇಚಾಡುತ್ತಿರ ಬೇಕು. ಹುಚ್ಚನಿಗೆ ಹೆಣ್ಣು ಕೊಡುತ್ತೇನೆಂದು ಬರಬೇಕಾದರೆ ಗಂಡು ಹುಡುಕಿ ಅವರಿಗೆಷ್ಟು ಬೇಸರವಾಗಿರಬೇಕು! ಗಂಡು ಸಿಕ್ಕದೆ ಎಷ್ಟು ತೊಂದರೆಯಲ್ಲಿರಬೇಕು? ರಾಮಶಾಸ್ತ್ರಿಗಳು ಬಹಳ ಯೋಚಿಸಿದರು.

'ಒಂದು ಹುಡುಗಿಯ ಕೊಲೆಯಾಯಿತು. ನಿಮ್ಮ ಮಗಳ ಕೊಲೆ ಯನ್ನೇಕೆ ಮಾಡಲಿ? ಹುಚ್ಚು ಬಿಟ್ಟರೆ, ಬಿ..ಟ್ಟ..ರೆ, ನನ್ನ ಮಗನೂ ಒಪ್ಪಿದರೆ, ಅಗತ್ಯವಾಗಿ ನಿಮ್ಮ ಮಗಳನ್ನೇ ತಂದುಕೊಳ್ಳುತ್ತೇನೆ. ಅಲ್ಲಿಯ ವರೆಗೂ ದಯಮಾಡಿ ಕಾಯ ಬೇಕು. ಅಷ್ಟರಲ್ಲಿ ಬೇರೆ ವರ ಸಿಕ್ಕಿದರೆ ನಿಮ್ಮ ಮಗಳ ಮದುವೆ ಮಾಡಿಬಿಡಿ, ನನಗೂ ಸಂತೋಷ' ಎಂದು ಖಂಡಿತವಾದ ಉತ್ತರವಿತ್ತರು.

ಸಾಮಿಯ ಸುದೈವದ ಬಲದಿಂದಲೋ, ಇಲ್ಲದೆ ಹೋದರೆ ಆಸ್ಪತ್ರೆಯ ಬಲದಿಂದಲೋ ಅವನಿಗೆ ಎರಡು ವರ್ಷದ ಮೇಲೆ ಗುಣವಾಯಿತು. ಅಂತೂ ಮದುವೆಯಿಲ್ಲದೆಯೇ ಸಾಮಿಯ ಹುಚ್ಚು ಹಾರಿಹೋಯಿತು.

ರಾಮಶಾಸ್ತ್ರಿಗಳು ಮಗನನ್ನು ಮನೆಗೆ ಕರೆದುಕೊಂಡು ಬಂದರು. ಸಾವಿತ್ರಮ್ಮನವರು ಸೊಸೆಯ ಸಾವಿನ ದುಃಖವನ್ನೂ ಮರೆತು, ಮತ್ತೆ ಮಗನನ್ನು ಹಡೆದಂತೆ ನಲಿದರು.

ಸಾಮಿ ಹುಚ್ಚು ಹಿಡಿದಿದ್ದಾಗ ಹೆಂಡತಿಗಾಗಿ ಹಂಬಲಿಸಿದ; ಹೆಂಡತಿ ಬಂದಳು. ಆದರೇನು? ತನ್ನ ಹಂಬಲು, ಹುಚ್ಚನ ಹಂಬಲು ಅವಳ ಪಾಲಿಗೆ ಯಮಪಾಶವಾಗಬೇಕೆ!

ಈಗ ಹುಚ್ಚು ಬಿಟ್ಟಿದೆ. ಆದರೆ, ಎಷ್ಟು ಹಂಬಲಿಸಿದರೆ ತಾನೇ ಚೆಲುವೆ 'ಚೆನ್ನು' ತನ್ನ ದೀರ್ಘನಿದ್ರೆಯಿಂದ ಎದ್ದು ಬರುವಳೆ?

ಸಾಮಿಗೆ ಇದೊಂದೇ ಕೊರತೆ. ಉಳಿದದ್ದೆಲ್ಲಾ ಸರಿಹೋಯಿತು. ನಿಜವಾಗಿಯೂ ಭಾರಿ ಕೆಲಸವೇ ಸಿಕ್ಕಿತು: ಎಪ್ಪತ್ತೈದು ರೂಪಾಯಿ ಸಂಬಳ. ಈ ಕೆಲಸ ಮೊದಲೇ ಸಿಕ್ಕಿದ್ದರೆ!—ಹುಚ್ಚು ಹಿಡಿಯುತ್ತಿರಲಿಲ್ಲ, ಆ ಹುಚ್ಚಿನ ಕಿಚ್ಚಿಗೆ ಚೆನ್ನು ಆಹುತಿಯಾಗುತ್ತಿರಲಿಲ್ಲ! ಆದರೆ..ವಿಧಿಸೂತ್ರ ನಮ್ಮ ಕೈಯಲ್ಲಿಲ್ಲ!

ರಂಗಸಾಮಿಗೆ ಹುಚ್ಚು ಬಿಟ್ಟ ವಿಚಾರ, ಕೆಲಸ ಸಿಕ್ಕಿದ ವಿಚಾರ ಇವೆಲ್ಲ ನಂಜಪ್ಪನವರಿಗೆ ತಿಳಿಯಿತು. ಪಾಪ, ಅವರಿಗೆ ಇನ್ನೂ ಗಂಡು ಸಿಕ್ಕಿರಲಿಲ್ಲ. ಅಥವಾ ರಂಗಸಾಮಿಯ ಹುಚ್ಚು ಬಿಡಲೆಂದೇ ಕಾದಿದ್ದರೋ! ಅಂತೂ ಅವರು ಮದುವೆಯ ವಿಚಾರವನ್ನು ಮತ್ತೆ ಪ್ರಸ್ತಾಪಿಸಿದರು. ರಾಮಶಾಸ್ತ್ರಿಗಳು, 'ಮಗನ ಇಚ್ಛೆಯಂತೆ' ಎಂದು ಒಂದೇ ಮಾತು ಹೇಳಿಬಿಟ್ಟರು.

ಮಡಿದಿರುವ ತನ್ನ ಮುದ್ದುಮಡದಿಯ ಪವಿತ್ರವಾದ ನೆನಪನ್ನೇ ಏಕಚಿತ್ತದಿಂದ ಸರ್ವದಾ ಧ್ಯಾನಿಸುತ್ತ, ಆ ಪವಿತ್ರಪೂಜೆಗೆ ಎಲ್ಲಿ ಭಂಗ ಬರುವುದೋ ಎಂದು ರಂಗಸಾಮಿ ಮತ್ತೆ ಮದುವೆ ಮಾಡಿಕೊಳ್ಳಲಿಲ್ಲ.

ಪರಲೋಕದಲ್ಲಿ ಹೆಂಡತಿಯನ್ನು ನೋಡುತ್ತೇನೆಂಬ ಭರವಸೆ ರಂಗಸಾಮಿಗೆ—ಅದೇ ಅವನಿಗೆ ಸದ್ಯದಲ್ಲಿ ಹಿಡಿದಿರುವ ಹುಚ್ಚು. ಅವನ ಬಯಕೆ ಕೈಗೂಡುವುದೆ?

## ಹುಚ್ಚನ ಹಂಬಲು!

# ಅವಳ ನೆನಪು

ಅವತ್ತು ಭಾನುವಾರ, ಆಫೀಸಿರಲಿಲ್ಲ. ಕಂಠಿ ಊಟಮಾಡಿ ಮಧ್ಯಾಹ್ನ ಹನ್ನೆರಡು ಘಂಟೆಗೆ ಮಲಗಿದವನು ಮೂರು ಘಂಟೆಗೆ ಎದ್ದನು. ಎದ್ದು, ಅತ್ತ ಇತ್ತ ತಿರುಗಿನೋಡಿದನು—ಕಮಲೆ ಸ್ವಲ್ಪ ದೂರದಲ್ಲಿ ಚಾಪೆಯ ಮೇಲೆ ತೋಳನ್ನೇ ತಲೆದಿಂಬು ಮಾಡಿಕೊಂಡು ಮಲಗಿದ್ದಳು.

ಸ್ವಲ್ಪ ಹೊತ್ತು ಹಾಗೆಯೇ ಅವಳನ್ನು ಸ್ವಲ್ಪ ದಿಟ್ಟಿಸಿ ನೋಡುತ್ತಿದ್ದನು; ಮೂಕನಾಗಿ, ಅಚಲನಾಗಿ ಕುಳಿತ್ತಿದ್ದನು. ಕಾರಣವನ್ನು ದೂರ ಅರಸಬೇಕಾಗಿಲ್ಲ—ಕಮಲೆ ಇವನನ್ನು ಆಗ ಸೆಳೆದು ಬಂಧಿಸಿದ್ದಳು.

ಚಂದ್ರನು ಎಷ್ಟು ಸಲ ಮೂಡಿಬಂದರೂ ನಮಗೆ ಬೇಸರವಾಗದು; ಬೆಳದಿಂಗಳನ್ನು ನೋಡಿ ನೋಡಿ ಕಂಗಳು ತಣಿಯವು; ಅದನ್ನು ಸವಿದು ಸವಿದು ಎದೆ ದಣಿಯದು. ಅಪಾರವಾದ ಆಳವಿಲ್ಲದ ಸೌಂದರ್ಯಸಾಗರದಲ್ಲಿ ಮುಳುಗಬಯಸಿದವನಿಗೆ ಎಲ್ಲಿಯ ವರೆಗೆ ಹೋದರೂ ಸ್ಥಳವಿದೆ.

ಕಮಲೆಯ ಚೆಲುವೂ ಕಂಠಿಗೆ ಅಂದು ಹೊಸದಾಗಿ ಕಂಡಿರಬೇಕು. ಅದರಲ್ಲಿಯೂ ಅವಳು ಮಲಗಿದ್ದ ಭಂಗಿಯಲ್ಲಿ ಕಂಠಿಯ ಕಣ್ಣಿಗೆ ಅವಳು ಅತ್ಯಂತ ಮಧುರ ಮನೋಹರವಾಗಿ ಕಂಡಿರಬೇಕು: ನಸುಜಾರಿದ ಸೆರಗು; ಸ್ವಲ್ಪ ಕೆದರಿ ಹೋದ ಮುಂಗುರುಳು; ಕಪೋಲದ ಕೆಳಗಿಂದ ತೋಳಿನ ಮೇಲೆ ಈ ಕಡೆಗೆ ಹರಿದು ಬಂದು ಬಿದ್ದಿದ್ದ ನೀಳವಾದ ಕಪ್ಪುಜಡೆ; ಇವೆಲ್ಲದರ ಮೇಲೆ ನಿದ್ರಾದೇವಿಯು ಬೀಸಿದ್ದ ಮಾಯೆ; ಹರ್ಷ, ಲಜ್ಜೆ, ಕೋಪ,

ತಾಪ, ಭಯವೇ ಮೊದಲಾದ ಯಾವ ಮನೋವಿಕಾರದ ಚೇಷ್ಟೆಗೂ ಸಿಲುಕಿ ರಲಿಲ್ಲ ಕಮಲೆಯು ಆಗಿನ ಚೆಲುವಿನ ರೀತಿ. ಮನೋವಿಕಾರಗಳ ಬೆಳಕಿನಲ್ಲಿ ಮೆರೆಯುವ ಚೆಲುವಿಗೂ ಒಂದು ಬೆಡಗಿದೆ. ಲಜ್ಜೆಯಿಂದ ಕೂಡಿರುವ ಸ್ತ್ರೀಸೌಂದರ್ಯವನ್ನು ನೋಡಿ ಯಾರ ಹೃದಯ ಅರಳುವುದಿಲ್ಲ? ಕೋಪದ ಕೆಂಬೆಳಕಿನಲ್ಲಿ ಕಂಗೊಳಿಸುವ ಅದೇ ಸೌಂದರ್ಯವನ್ನು ಕಂಡು ಯಾರ ಕಂಗಳರಳುವುದಿಲ್ಲ? ದುಗುಡದ ಕಂಬನಿಯಿಂದ ತೊಯ್ದಿರುವ ಚೆಲುವೆಯ ಮುಖ ಕಂಡು ಯಾರ ಮನಸ್ಸು ಕರಗುವುದಿಲ್ಲ? ಆದರೆ ನಿದ್ರೆಮಾಡುತಿದ್ದ ಕಮಲೆಯ ಸೌಂದರ್ಯದ ರೀತಿಯೇ ಬೇರೆಯಾಗಿತು; ಅದು ಸರಳತೆಯಿಂದ ಕೂಡಿದ ಸೌಂದರ್ಯ; ಮಗುವಿನ ಸೌಂದರ್ಯ.

ಕಂಠಿ ಕಮಲೆಯನ್ನು ಏನೋ ಒಂದು ವಿಧವಾದ ಶಾಂತಚಿತ್ತದಿಂದ ನೋಡುತ್ತಿದ್ದನು. ತೊಟ್ಟಿಲಿನಲ್ಲಿ ಮಲಗಿರುವ ಮಗುವನ್ನು ನೋಡುವಂತೆಯೇ ನೋಡುತ್ತಿದ್ದನು.

ಅವಳನ್ನು ಎಬ್ಬಿಸುವುದಕ್ಕೆಂದು ಹತ್ತಿರ ಹೋದ; ಮೆಲ್ಲನೆ ತೋಳು ಮುಟ್ಟಿ, ಸರಕ್ಕನೆ ಕೈ ತೆಗೆದ; ಎಬ್ಬಿಸುವುದಕ್ಕೆ ಮನಸ್ಸು ಬರಲಿಲ್ಲ.

'ಕಮಲಾ' ಎಂದು ಒಮ್ಮೆ ಮೆಲ್ಲನೆ ಕೂಗಿದ ಕಂಠಿ.

ಕಮಲೆ ಏಳಲಿಲ್ಲ; ನಿದ್ದೆಯಲ್ಲಿ ಮುಳುಗಿದ್ದಳು.

'ಅಯ್ಯೋ ಪಾಪ. ಮಲಗಿರಲಿ' ಎಂದು ಕೋಣೆಯೊಳಕ್ಕೆ ಹೋಗಿ ಒಲೆ ಹೊತ್ತಿಸಿ, ಕಾಫಿಗೆ ನೀರಿಟ್ಟು, ಮುಖ ತೊಳೆದುಕೊಂಡು ಬಂದು ತನ್ನ ಮೇಜಿನ ಮುಂದೆ ಕುಳಿತ.

ಯಾವದೋ ಒಂದು ಕಥೆಯ ಪುಸ್ತಕ ಕೈಗೆ ಸಿಕ್ಕಿತು. ಕಥೆ ಓದುತ್ತಾ ಕುಳಿತ. ಐದು ನಿಮಿಷವಾಯಿತು, ಅಷ್ಟೆ. ಕಥೆ ಸ್ವಾರಸ್ಯವಾಗಿರಲಿಲ್ಲ ವೇನೋ, ಪುಸ್ತಕವನ್ನು ಮೇಜಿನ ಮೇಲೆಸೆದು, ನೀಳವಾಗಿ ಆಕಳಿಸಿ ಮೈಮುರಿದ. ಮೈಮುರಿಯಲು ಹಿಂದಿರುಗಿದಾಗ ನೋಡುತ್ತಾನೆ, ಯಾವ ಮಾಯದಲ್ಲಿ ಎದ್ದು ಹೋಗಿದ್ದಳೋ—ಕಮಲೆ ಚಾಪೆಯ ಮೇಲಿರಲಿಲ್ಲ.

ಕಂಠಿ ಯಾವುದೋ ಆಫೀಸು ಕಾಗದವನ್ನು ಹುಡುಕಬೇಕಾಗಿತ್ತು. ಮೇಜಿನ ಮೇಲೆಲ್ಲಾ ಕಾಗದ ಪುಸ್ತಕಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಅಲ್ಲೆಲ್ಲಾ ಹುಡುಕಿ ನೋಡಿದನು. ಎಷ್ಟು ಹುಡುಕಿದರೂ ಅದು ಸಿಕ್ಕಿಲಿಲ್ಲ.

ಪ್ರತಿಯೊಂದು ಪುಸ್ತಕದ ಹಾಳೆಗಳನ್ನೂ ತಿರುವಿತಿರುವಿ ನೋಡಿದನು. ಸಿಕ್ಕ ಲಿಲ್ಲ. ಬೇಜಾರಾಯಿತು, ಕೋಪ ಬಂದಿತು—ಯಾರ ಮೇಲೂ ಅಲ್ಲ !.. ಮೇಜಿನ ಮೇಲಿದ್ದ ಕಾಗದ ಪುಸ್ತಕಗಳನ್ನು ಎರಡು ಕೈಗಳಿಂದಲೂ ಸವರಿ ನೂಕಿದನು; ಕೆಲವು ಕೆಳಗೆ ಬಿದ್ದುಹೋದುವು. ಕಡೆಗೆ, ಮೇಜಿನ ಸಂದೂಕ ವನ್ನು ಎಳೆದು ಬಹಳ ಹೊತ್ತು ಹುಡುಕಿ ನೋಡುತ್ತಿದ್ದನು.

ಇದ್ದಕ್ಕಿದ್ದ ಹಾಗೆ ಕಂಠಿಯ ಕಣ್ಣುಗಳರಳಿದುವು; ಕೋಪದಿಂದ ಬಿಗಿ ದಿದ್ದ ಹುಬ್ಬುಗಳು ಸಡಿಲಾದುವು. ಮುಖದ ಮೇಲೆ ಒಂದು ಮೆಲು ನಗೆಯಾಡಿತು.

ಕಂಠಿಗೆ ಸಂತೋಷವಾಗಿರಬೇಕು—ತಾನು ಬಲು ಹೊತ್ತಿನಿಂದ ಹುಡು ಕುತ್ತಿದ್ದ ಕಾಗದ ಸಿಕ್ಕಿತೆಂದಲ್ಲ; ಅದು ಸಿಕ್ಕಿಯೂ ಇರಲಿಲ್ಲ.

ತಾನು ಹಿಡಿದಿದ್ದ ಫೋಟೋ ಚಿತ್ರವೊಂದನ್ನು ಎವೆಯಿಕ್ಕದೆ ದಿಟ್ಟಿಸಿ ನೋಡುತ್ತಿದ್ದನು.

ನೋಡುತ್ತಿದ್ದವನು ಅದನ್ನು ಹಾಗೆಯೇ ಎದೆಗಪ್ಪಿಕೊಂಡನು. ಅವನ ಅರಳಿದ ಕಣ್ಣುಗಳು ಮುಗಿದುವು; ಆ ಮೆಲುನಗೆ ಮರೆಯಾಯಿತು; ಕೊರ ಳಿನ ಸೆರೆಗಳುಬ್ಬಿದುವು; ದುಃಖವು ತಡೆಯದಾಯಿತು. ಕಣ್ಣುಗಳಿಂದ ಕಂಬನಿಗಳು ಜಾರಿದುವು—ಒಂದೆರಡು ಹನಿಗಳು ಕೆನ್ನೆಯಿಂದ ಜಗುಳಿ ಅವನ ಎದೆಯ ಮೇಲೆ ಮಲಗಿದ್ದ ಚಿತ್ರದ ಮೇಲೂ ಉರುಳಿದುವು.

ಸ್ವಲ್ಪ ಹೊತ್ತಾಯಿತು. ಕಂಠಿ ಚಿತ್ರವನ್ನು ತೆಗೆದು ಮೇಜಿನ ಮೇಲೆ ಸ್ವಲ್ಪ ದೂರದಲ್ಲಿ ಒಂದು ಪುಸ್ತಕಕ್ಕೆ ಒರಗಿಸಿಟ್ಟನು.

ಅತ್ತ ಇತ್ತ ನೋಡದೆ ನಟ್ಟದಿಟ್ಟಿಯಿಂದ ಚಿತ್ರವನ್ನೆ ಬಹಳ ಹೊತ್ತು ನೋಡುತ್ತಿದ್ದನು. ಅವನ ಮುಖದಲ್ಲಿ ಆ ಮೊದಲಿನ ತೆಳುನಗೆ ಮತ್ತೆ ಮೂಡಿತ್ತು. ಹರ್ಷಭರಿತ ಮನೋಮಂದಿರದಿಂದ, ಆತ್ಮತೃಪ್ತಿಯಿಂದ ಹೊರಟ ಸ್ವಚ್ಛವಾದ ನಗೆಯಲ್ಲ ಅದು; ನೊಂದ ಮನಸ್ಸಿನ ಕೂಗು,ಹೃದಯದ ಅರಕೆಯ ವಾಣಿ, ಆ ನಗೆಯ ಛದ್ಮವೇಷವನ್ನು ತಳೆದಿತ್ತು.

ಆಹ ! ಸತ್ತವರ ನೆನಪಿಗೆಂದು ಅವರ ಭಾವಚಿತ್ರಗಳನ್ನು ತೆಗೆಸಿಟ್ಟು ಕೊಳ್ಳುವೆವು. ಅದು ಅರಕೆಯನ್ನ ಪೂರ್ಣಮಾಡಬಲ್ಲುದೆ ? ಯಾವ ಭಾವ ಚಿತ್ರವು ಸತ್ತವರ ಜೀವರಹಿತ, ಆತ್ಮರಹಿತ ಸ್ವರೂಪವನ್ನು ಶಾಶ್ವತಗೊಳಿಸಿ

ನಮ್ಮ ಮನಸ್ಸಿಗೊಂದು ನೆಮ್ಮದಿಯನ್ನು ತಂದು ಕ್ಷಣಿಕವಾದ ಹುಸಿ ಯಾದ ತೃಪ್ತಿಯನ್ನು ಕೊಡುತ್ತದೆಯೋ ಅದೇ ಭಾವಚಿತ್ರವು—ಒಮ್ಮೆ ಆತ್ಮತೇಜಸ್ಸಿನಿಂದ ಕಂಗೊಳಿಸುತ್ತಿದ್ದ, ಜೀವದಿಂದ ತುಂಬಿ ತುಳುಕುತಿದ್ದ ಪ್ರಿಯರ ಅಂದಿನ ನೆನಪನ್ನು ತಂದು ಅರಕೆಯ ಅರಿವನ್ನೂ ನಿರಂತರವಾಗಿ ಸುವುದು! ಮರೆವಿನ ಮುಬ್ಬಿನಲ್ಲಿ ಹುದುಗಿರುವ ವೇದನೆಯ ನೆನಪನ್ನು ತೆರದು ತೋರಿಸುವ ಬೀಗದ ಕೈಗಳು ಹಾಳು ಭಾವಚಿತ್ರಗಳು!

ಅವಳ ಪ್ರತಿರೂಪು, ಆ ಚಿತ್ರದ ಸುಂದರವಾದ ಪ್ರತಿರೂಪು, ಅವನ ಮನಸ್ಸಿಗೆ ಏನೋ ಒಂದು ವಿಧವಾದ ಆನಂದವನ್ನು ಕೊಟ್ಟಿತ್ತು; ಆದರೆ ಅದೇ ಪ್ರತಿರೂಪು, ಅದೇ ಸುಂದರವಾದ ಪ್ರತಿರೂಪು, ಅವಳ ನೆನಪನ್ನು ತಂದು ಅವನ ಹೃದಯದಳಲಿನ ಚಿಲುಮೆಯ ಮುಚ್ಚಳವನ್ನು ತೆರೆಯಿತು.

ಆ ಚಿತ್ರದಲ್ಲಿ ಕಂಗೊಳಿಸುತ್ತಿದ್ದ ತರುಣಿಯ ಸೌಂದರ್ಯವೆಂದರೆ—ಅದೊಂದು ಬಗೆಯ ಸೌಂದರ್ಯ: ಹರೆಯ ಏರಿದ ಸರಿಯಾದ ಅಂಗಾಂಗಗಳ ಸೌಂದರ್ಯವಲ್ಲ. ಮೂಗು ಸಂಪಿಗೆಯ ಹೂವಿನಂತೆ 'ಎಸಾಳಾಗಿ' 'ನೀಟಾಗಿ' ಇರಲಿಲ್ಲ; ಕಣ್ಣುಗಳು ಪದ್ಮಪತ್ರದಂತಿರಲಿಲ್ಲ, ವಿಶಾಲಾಕ್ಷಿ ಗಳೂ ಅಲ್ಲ. ಚಿತ್ರದ ತುಟಿಗಳನ್ನು ಹವಳದಂಥ ತುಟಿಗಳೆಂದು ಹೇಳಲಾ ಗದು. ಫೋಟೋ ತೆಗೆದವನು ಚಿತ್ರಕ್ಕೆ ಬಣ್ಣ ಹಾಕಿರಲಿಲ್ಲ. ಮುಂಗುರುಳಿನ ಕೊಂಕುಗಳನ್ನು, ಚಿತ್ರವಿಚಿತ್ರವಾದ ಕೊಂಕುಗಳನ್ನು, ಯಾವುದಕ್ಕೆ ಹೋಲಿ ಸುವುದು? ಆ ಚಿತ್ರದ ಕಣ್ಣು ಮೂಗುಗಳಿಗೆ ಹೊಸ ಹೊಸ ಉಪಮಾನ ಗಳನ್ನು ಕೊಟ್ಟು ವರ್ಣನೆಯನ್ನು ಬೆಳಸಬಹುದಾದರೂ ಆ ಪ್ರತಿಬಿಂಬಿತ ವದನದ ಸೌಂದರ್ಯವನ್ನು ಕಣ್ಣಿಗೆ ಕಟ್ಟುವ ಹಾಗೆ ಮಾಡುವುದಕ್ಕಾಗುವು ದಿಲ್ಲ. ಆ ಚಿತ್ರವನ್ನು ಮನಗಾಣಬೇಕಾದರೆ ಆ ಚಿತ್ರವನ್ನೇ ನೋಡಬೇಕು. ಮೂಲವ್ಯಕ್ತಿಯ ಮುಗುಳುನಗೆಯೊಂದೂ ಬಹಳ ಸ್ವಾಭಾವಿಕವಾಗಿ—ಸ್ವಾಭಾವಿಕವಾಗಿರುವುದು ಅಪರೂಪ—ರೂಪುಗೊಂಡಿತ್ತು. ಚಿತ್ರದಲ್ಲಿ ಕಾಣುತ್ತಿದ್ದ ಆ ತುಂಬುಕೆನ್ನೆ—ಉಬ್ಬಿದ ಕೆನ್ನೆಯಲ್ಲ; ತುಂಬುಕೆನ್ನೆ-ವಾಸ್ತ ವಿಕವಾಗಿ ಎಷ್ಟು ಮೃದುವಾಗಿದ್ದಿರಬೇಕು! ಸರಳತೆಯನ್ನು ಸೂಸುವ ಆ ನೋಟದ ಹಿಂದೆ ಎಂತಹ ಸರಳವಾದ ಮನಸ್ಸು ಇದ್ದಿರಬೇಕು; ಎಷ್ಟು ಪ್ರೇಮಪೂರಿತವಾದ ಹೃದಯವಿದ್ದಿರಬೇಕು! ಚಿತ್ರದ ತುಟಿಗಳು ಸೂಸು

ತ್ತಿದ್ದ ಅವ್ಯಕ್ತ ಮಧುರವಾದ ಅಸ್ಫುಟವಾದ ತಿಳಿಯಾದ ಆ ತೆಳುನಗೆಯಲ್ಲಿ ಎಂತಹ ಮೃದುನುಡಿಗಳು; ಎಂತಹ ಮೃದುವರ್ತನೆ, ಎಂತಹ ಹಾಸ್ಯ, ಎಷ್ಟು ಹುಡುಗಾಟಿಕೆ, ಮೇಲಾಗಿ ಎಷ್ಟೊಂದು ಲಜ್ಜೆ ಹರಿಯುತ್ತಿದ್ದಿರಬೇಕು!

ತನ್ನ ಬಾಳನ್ನು ಬೆಳಗುತ್ತಿದ್ದ ಅಂಥ ಚೆಲುವೆಯನ್ನು ನೆನೆದು ಕಂಠಿ ಗೋಳಾಡುವುದರಲ್ಲಿ ಆಶ್ಚರ್ಯವೇನು?

ಕಂಠಿ ಚಿತ್ರವನ್ನು ನೋಡುತ್ತ ಮೌನವಾಗಿ ಕುಳಿತ್ತಿದ್ದನು.

ಕಮಲೆ ಒಳಗಿನಿಂದ—'ಭಾವಾ' ಎಂದು ಕೂಗಿದಳು.

ಕಂಠಿಗೆ ಕೇಳಿತೋ ಇಲ್ಲವೊ..ಮೊದಲಿನಂತೆಯೇ ಅಳಲಿನಾಳದಲ್ಲಿ ಮುಳುಗಿ ಮೂಕನಾಗಿ ಕುಳಿತಿದ್ದನು.

ಕಮಲೆ ಒಂದು ಲೋಟಾ ಕಾಫಿ ಹಿಡಿದುಕೊಂಡು, ಬೆಕ್ಕಿನ ಹಾಗೆ ಸದ್ದು ಮಾಡದೆ ಹಿಂದಿನಿಂದ ಬಂದಳು; ಅಲ್ಲಿಯೇ ಹಿಂದುಗಡೆಯಿಂದ ಒಂದು ಸ್ಟೂಲಿನ ಮೇಲೆ ಲೋಟವನ್ನು ಮೆಲ್ಲನಿರಿಸಿ, ಕಂಠಿಯ ಹಿಂದೆ ನಿಂತು, ತುಸ ಹೊತ್ತು ಹೊಂಚು ಹಾಕಿ, ಅವನ ಕಣ್ಣು ಮುಚ್ಚಿದಳು.

ಆಹಾ! ಏನು ಸಂತೋಷವಾಯಿತವಳಿಗೆ! ಸುಳಿವು ಕೊಡದಂತೆ ಕಣ್ಣು ಮುಚ್ಚುವುದು ಸುಲಭವಲ್ಲ—ಕಾಲು ಸರವೋ, ಅಂದುಗೆಯೋ ಕಣಕಣ ಎಂದಿದ್ದರೆ? ಕಾಫಿಯ ಬಟ್ಟಲನ್ನಿರಿಸುವಾಗ ತವಕದಲ್ಲಿ ಅದೇ ಉರುಟಿ ಹೋಗಿದ್ದರೆ? ತಡೆಯಲಾರದ ನಗು ಬಂದುಬಿಟ್ಟಿದ್ದರೆ? ಇವನ್ನೆಲ್ಲ ತಪ್ಪಿಸಿಕೊಂಡು ಕಮಲೆ ಕಣ್ಣು ಮುಚ್ಚಿದ್ದಳು ಕಂಠಿಗೆ. ಏನೋ ಒಂದು ಗೆಲುವಿನ ಹರುಷವು ಅವಳ ಮುಖವನ್ನು ಆವರಿಸಿತ್ತು.

ಕಂಠಿ ಬಿಡಿಸಿಕೊಳ್ಳಬೇಕೆಂದು ಹೋಗುವಷ್ಟರಲ್ಲಿಯೇ ಅವಳು ತಾನಾಗಿ ಕೈ ತೆಗೆದಿದ್ದಳು; ಆ ಹರುಷ, ಆ ಗೆಲುವಿನ ನೋಟ ಅವಳ ಮುಖದಲ್ಲಿರಲಿಲ್ಲ.

'ಇದೇನು ಭಾವ......' ('ಭಾವನವರು' ಮೌನವಾಗಿದ್ದರು) 'ಅಲ್ಲ......ಇದೇನು......ಕಣ್ಣೀರು!' ಎಂದು ಬೆದರಿದವಳಂತೆ ಕೇಳಿದಳು ಕಮಲೆ.

ಕೂಡಲೆ ಅವಳ ಕಣ್ಣು ಮೇಜಿನ ಮೇಲಿದ್ದ ಫೋಟೋವಿನ ಕಡೆಗೆ ಹರಿಯಿತು.

'ಅಕ್ಕಾ ! ' ಎಂದು ಚೀರಿ, ತಟಕ್ಕನೆ ಕೈನೀಡಿ ಚಿತ್ರವನ್ನು ತೆಗೆದು ಕೊಂಡು ಎದೆಗಪ್ಪಿಕೊಂಡಳು. ಅವಳೆರಡು ಕಣ್ಣುಗಳಿಂದಲೂ ಕಣ್ಣೀರ ಕೋಡಿವರಿಯಿತು.

ಶಾರದೆಯು ಫೋಟೋವನ್ನು ತಾನೂ ನೋಡಕೂಡದು, ಕಮಲೆಗೂ ತೋರಕೂಡದು ಎಂದು ಕಂಠಿ ಆ ಚಿತ್ರವನ್ನು ಮೇಜಿನೊಳಕ್ಕೆ ಎಲ್ಲೋ ಅವಿಸಿಬಿಟ್ಟಿದ್ದನು. ಅದನ್ನು ಇಬ್ಬರೂ ನೋಡುವ ಸಂಘಟನೆಯೊದಗಿತು!

ಎಷ್ಟೇ ಸಣ್ಣದಾದ ಅಮುಖ್ಯವಾದ ವ್ಯಾಪಾರವೇ ಆಗಲಿ, ಒದಗ ಬೇಕಾದದ್ದು ಒದಗಲೇಬೇಕಲ್ಲವೆ?

ಕಮಲೆ ಕಂಠಿಯ ಭುಜದ ಮೇಲೆ ತನ್ನ ಮುಖವನ್ನಿರಿಸಿ ಅಳುತ್ತಿ ದ್ದಳು. ತಾನು ಯಾರನ್ನು ನೆನೆದು ದುಃಖಿಸುತ್ತಿದ್ದನೋ ಅವಳಿಗಾಗಿ ಕಮಲೆಯೂ ಕಣ್ಣೀರುಗರೆಯುತ್ತಿದ್ದಳು. ಮತ್ತಿನ್ನಿಬ್ಬರ ಕಣ್ಣೀರೂ ಕೂಡಿ, ಕಣ್ಣೀರ ಕಡಲೇ ಮೊರೆಯುತ್ತಿದ್ದರೂ ಆ ಕೂಗು ಕೇಳಿ ಶಾರದೆ ಎದ್ದು ಒರು ವಂತಿರಲಿಲ್ಲ!

'ಭಾವಾ ! ಅಕ್ಕ ಎಲ್ಲಿ ? ' ಎಂದು ಮಗುವಿನಂತೆ ಕೇಳಿದಳು ಕಮಲೆ.

'ಕಮಲಾ ! ಕಮಲಾ ! ನೀನು ನಿಜವಾಗಿಯೂ ಭಾವ ಭಾವ ಎಂದು ನನ್ನನ್ನು ಕರೆಯುತ್ತಾ ಲಂಗ ಹಾಕಿಕೊಂಡು ಓಡಾಡುತ್ತಿದ್ದೆಯಲ್ಲ..ಆ ಕಾಲ ಚೆನ್ನಾಗಿತ್ತು. ಆ ಕಾಲ ಮತ್ತೆ ಬರಬಾರದೆ ? ಆದರೆ ಅವಳು ಬರುವ ಹಾಗಿಲ್ಲ. ನೀನೇನೊ ಮರೆತೂ ಮರೆತೂ ಈಗಲೂ ಭಾವಾ ಭಾವಾ ಎಂದೇ ಕೂಗುತ್ತಿ. ನಾನು ಮಾತ್ರ..ಅಯ್ಯೋ ದೇವರೇ !..ಹೀಗೂ ಆಗಬೇಕಿತ್ತೆ ! ......ಎಂಥ ಅನ್ಯಾಯ !....ಎಷ್ಟು ನೀಚ ನಾನು ' ಎಂದು ತುಸ ಹೊತ್ತು ಸುಮ್ಮನಿದ್ದನು; 'ಕಮಲಾ, ಅತ್ತರೆ ಅಕ್ಕ ಬರುತ್ತಾಳೆಯೇ ? ಅಳಬೇಡ ಸುಮ್ಮನಿರು ' ಎಂದು ಅವಳನ್ನು ಸಮಾಧಾನಪಡಿಸಹೋದನು.

ಅವನ ಕಣ್ಣೀರೇ ಇನ್ನೂ ಆರಿರಲಿಲ್ಲ!

ಇದ್ದಕ್ಕಿದ್ದ ಹಾಗೆಯೇ ಕಮಲೆ ಎದ್ದು, ಫೋಟೋವನ್ನು ಮೊದಲಿ ನಂತೆ ಮೇಜಿನ ಮೇಲಿರಿಸಿ, ಸೆರಗಿನ ಕೊನೆಯಿಂದ ಕಣ್ಣೀರೊರಿಸಿಕೊಂಡು— 'ಕಾಫಿ ತಗೋಳಿ, ಆರಿಹೋಗುತ್ತೆ ' ಎಂದು ಕಾಫಿಯನ್ನು ಕೈಗೆ ತೆಗೆದು ಕೊಂಡಳು. ಸ್ವಲ್ಪ ತಣ್ಣಗಾಗಿತ್ತು ಕಾಫಿ.

'ಅಯ್ಯೋ, ಆರೇಹೋಗಿದೆ' ಎಂದಳು ಮುಟ್ಟಿ ನೋಡಿ.

'ಇರಲಿ ಕೊಡು ಇಲ್ಲಿ' ಎಂದು ಕೇಳಿದ ಕಂಠಿ.

ಕಮಲೆ ಕೊಡಲಿಲ್ಲ; ಒಳಕ್ಕೆ ಹೋಗಿ, ತನಗಾಗಿ ಇಟ್ಟುಕೊಂಡಿದ್ದ ಕಾಫಿಯನ್ನು ನೋಡಿದಳು. ಕೆಂಡದ ಮೇಲಿದ್ದದ್ದರಿಂದ ಬೆಚ್ಚಗಿತ್ತು. ಅದನ್ನು ತಂದುಕೊಟ್ಟಳು ಕಂಠಿಗೆ.

ಆದರದಿಂದ ತಂದುಕೊಟ್ಟ ಕಾಫಿಯನ್ನು ಕಂಠಿ ಕುಡಿದು ನುಡಿದನು:

'ಕಮಲಾ, ಕಾಫಿ ತುಂಬಾ ಚೆನ್ನಾಗಿದೆ. ಅವಳೂ ಹೀಗೆಯೇ ಕಾಸುತ್ತಿದ್ದಳು. ಎಲ್ಲದರಲ್ಲಿಯೂ ಹಾಗೆಯೇ—ಅವಳ ತಂಗಿ ನೀನು, ಅವಳು ಇಲ್ಲ ಅನ್ನಿಸಿಲ್ಲ' ಎಂದು ಕಮಲೆಯನ್ನು ಪ್ರೇಮಪೂರಿತ ದೃಷ್ಟಿಯಿಂದ ನೋಡಿದನು.

ಕಮಲೆಯ ಮುಖವು ಮತ್ತೆ ಗೆಲವುಗೂಡಿತು.

'ಅದಿರಲಿ. ನಾನೊಂದು ಹೇಳ್ತೀನಿ ಮಾಡ್ತೀರ ಭಾವ?. . ಅಯ್ಯೋ ಹಾಳಾದ್ದು—ಥೂ ಮರೆತೂ ಹೋಗುತ್ತೆ. . ಮಾಡ್ತೀರ ಅಂದ್ರೆ?'

'ಏನು ಅದು?'

'ಏನೂ ಇಲ್ಲ. ಅಕ್ಕನ ಫೋಟೋ ದೊಡ್ಡದು ಮಾಡಿಸಿ ಅಂದ್ರೆ—ಅಕ್ಕನ್ನ ಸದಾ ನೋಡ್ತಾನೆ ಇರಬಹುದು—ಏನೂ ಅಂದ್ರೆ?'

'ಆಗಲಿ' ಎಂದ ಕಂಠಿ.

---

# ಕುರುಡು ಪ್ರೇಮ?— ಮೂಕ ಪ್ರೇಮ!

ಪ್ರತಿದಿನವೂ ಮಧ್ಯಾಹ್ನ ಊಟ ಆದ ಕೂಡಲೆ ಹಿತ್ತಿಲಿನ ಸೀಬೆಮರ ಹತ್ತುತ್ತಿದ್ದೆ. ಆ ಸೀಬೆಮರದಲ್ಲಿ ಬಿಟ್ಟ ಹಣ್ಣುಗಳೆಲ್ಲಾ ನನ್ನ ಪಾಲೇ ಆಗಿತ್ತು. 'ಎಲ್ಲಾದರೂ ಹೊಟ್ಟೆಗಿಟ್ಟೆ ನೋವು ಬಂದು ಒರಗಿಹೋಗ್ತಿ' ಎನ್ನುತ್ತಿದ್ದರು ನಮ್ಮ ತಾಯಿ. 'ಯಾವತ್ತಾದರೂ ಮರದಿಂದ ಬಿದ್ದು ಕೈಕಾಲು ಮುರಿದುಕೊಳ್ಳುತ್ತಿ ನನಗೆ ಗೊತ್ತು' ಎಂದು ಸಾರುತ್ತಿದ್ದರು ನಮ್ಮಪ್ಪ. ಮರದ ಮೇಲಿನ ಹಣ್ಣು ಮರದ ಮೇಲೆಯೇ ತಿಂದರೆ ರುಚಿ ಎಂದು ನನ್ನ ಬಾವನೆ; ಭಾವನೆಯೇಕೆ, ಅನುಭವ.

ಒಂದು ದಿವಸ ಸಾಯಂಕಾಲ ಮರ ಹತ್ತಿದೆ. ಸಾಯಂಕಾಲ ಮರ ಹತ್ತಿದ್ದು ಅವತ್ತೇ ಮೊದಲು. ಸಂಜೆ ಮಬ್ಬಾಗುತ್ತ ಬರುತ್ತಿದ್ದುದರಿಂದಲೋ ಅಥವಾ ಒಂದು ತಿಂಗಳಿಂದಲೂ ಬಿಡದೆ ಮರವನ್ನೆಲ್ಲಾ ಶೋಧಿಸಿಬಿಟ್ಟಿದ್ದುದರಿಂದಲೋ ಒಂದು ಹಣ್ಣೂ ಕಣ್ಣಿಗೆ ಕಾಣಲಿಲ್ಲ. ಆ ಕೊಂಬೆಯಿಂವ ಈ ಕೊಂಬೆಗೆ, ಈ ಕೊಂಬೆಯಿಂದ ಆ ಕೊಂಬೆಗೆ ಜಾರಿ, ಹಾರಿ ಕಾಲೆಲ್ಲ ತರಿದು ಹೋಗಿತ್ತು. ಪಟ್ಟ ಕಷ್ಟ ವ್ಯರ್ಥವಾಗದೆ, ಕೊನೆಗೆ ಒಂದು ಹಣ್ಣು ಕಣ್ಣಿಗೆ ಬಿತ್ತು.

ಅದು ಒಂದು ಕೊಂಬೆಯ ತುದಿಯಲ್ಲಿ, ತುತ್ತತುದಿಯಲ್ಲಿತ್ತು. ಆ ಕೊಂಬೆ ಪಕ್ಕದ ಮನೆಯ ಹಿತ್ತಿಲಿಗೆ ಹೋಗಿ ಇಳಿದಿತ್ತು. ಆ ಕೊಂಬೆಯ ತುದಿಗೆ ಹೋಗಿ ಹಣ್ಣು ಕೊಯ್ಯುವುದು ಪ್ರಯಾಸವಾಗಿಯೇ ತೋರಿತು! ಆದರೂ ಪ್ರಯತ್ನಪಟ್ಟು ನೋಡೋಣವೆಂದು, ಆಸರೆಗಾಗಿ ಸಣ್ಣ ಸಣ್ಣ ಕೊಂಬೆಗಳನ್ನು ಕೈಲಿ ಹಿಡಿದುಕೊಂಡು, ಕೊಂಬೆಯ ಮುಂದುಮುಂದಕ್ಕೆ ಮೆತ್ತಗೆ ಸರಿದು ಹೋದೆ. ಸರಿಯುವಾಗಲೆಲ್ಲ ಕಣ್ಣು ಹಣ್ಣಿನ ಮೇಲೆಯೇ

ಇತ್ತು; ಅತ್ತ ಇತ್ತ ನೋಡಿದರೆ ಅದು ಎಲ್ಲಿ ಕಣ್ಮರೆಯಾಗಿಬಿಡುವುದೋ ಎಂದು ಶಂಕೆ.

ಸ್ವಲ್ಪ ಹೊತ್ತಾಯಿತು. ಕೊಂಬೆಯ ತುದಿಗೆ ಹೋದೆ. ಹಣ್ಣು ಕೈಗೆ ಸಿಕ್ಕಿತು. ಒಳ್ಳೆ ಪಕ್ವಾಕ್ಕಹಣ್ಣು. ಭಣ್ಣಗಿತ್ತು. ಕೊನೆಗದು ಕೈಗೆ ಸಿಕ್ಕಿಯೇ ಸಿಕ್ಕಿತು. ಕಾಲುವಟ್ಟಿಗೆ ಜಾರಿತು. ಕೆಳಕ್ಕೆ ಧೊಪ್ಪನೆ ಬಿದ್ದೆ!

ಸುಮತಿ ಅಲ್ಲಿದ್ದಳು; ನಾನು ಬಿದ್ದದ್ದನ್ನು ನೋಡಿ ಫಕ್ಕನೆ ನಕ್ಕಳು.

ಸುಮತಿ ಯಾರು ಎಂದು ಕೇಳಬಹುದಲ್ಲವೆ? ಯಾರು ಎಂದು ಹೇಳುತ್ತ ಹೋದರೆ—

'ಬರೆಯುತ್ತ ಹೋದರೆ ಅನ್ನು' ಎಂದು ರಾಜ ಬಾಯಿಹಾಕಿದ ನಡುವೆ.

'ಹೂಂ, ಬರೆಯುತ್ತಾ ಹೋದರೆ' ಎಂದು ನಾನು ಮತ್ತೆ ಓದಲು ಮೊದಲು ಮಾಡಿದೆ:

....ಯಾರು ಎಂದು ಹೇಳುತ್ತಾ ಹೋದರೆ ಕಥೆ ಮುಂದಕ್ಕೆ ಸಾಗುವುದಿಲ್ಲ; ಆದರೂ ಯಾರು ಎಂದು ಸ್ವಲ್ಪವಾದರೂ ಸೂಚಿಸದಿದ್ದರೆ ಕಥೆ ಅರ್ಥವಾಗದಿರಬಹುದು.

ಸುಮತಿ ನಮ್ಮ ಪಕ್ಕದ ಮನೆಯಲ್ಲಿ ಬಾಡಿಗೆಗಿದ್ದ 'ಅಜ್ಜಮ್ಮ' ಭಾಗೀರಥಮ್ಮನವರ ಮೊಮ್ಮಗಳು. ಮಗನಿಗೆ ಉತ್ತರ ದೇಶದಲ್ಲಿ ಎಲ್ಲಿಯೋ ರೈಲ್ವೆ ಇಲಾಖೆಯಲ್ಲಿ ಕೆಲಸ ದೊರೆತ ಮೇಲೆ ಭಾಗೀರಥಮ್ಮನವರು ಅವನೊಡನೆ ಹೋಗಿ ಅಲ್ಲಿಯೇ ಇದ್ದುಬಿಟ್ಟರು. ಬಹಳ ಕಾಲ ಇತ್ತಕಡೆ ಬರಲೇ ಇಲ್ಲ. ಸುಮತಿ ಅಲ್ಲಿಯೇ ಹುಟ್ಟಿದವಳು. ಈಗ ನಮ್ಮ ಕಡೆಗೆ ಕೊಟ್ಟು ಮದುವೆಮಾಡಬೇಕೆಂದು ಭಾಗೀರಥಮ್ಮನವರು ಮೊಮ್ಮಗಳನ್ನೂ ಕರೆದುಕೊಂಡು ವರಾನ್ವೇಷಣಕ್ಕಾಗಿ ಮೈಸೂರಿಗೆ ಬಂದಿದ್ದರು. ನಮ್ಮಪಕ್ಕದ ಮನೆ ಖಾಲಿ ಇತ್ತು; ಭಾಗೀರಥಮ್ಮನವರಿಗೂ ನಮ್ಮ ತಾಯಿಗೂ ಹಿಂದಿನ ಪರಿಚಯ ಸ್ವಲ್ಪ ಇತ್ತು. ಸರಿ, ನಮ್ಮ ಮನೆಯ ಪಕ್ಕದ ಮನೆಗೇ ಬಾಡಿಗಿಗೆ ಬಂದರು. ಅವರು ಬಾಡಿಗೆಗೆ ಬಂದು ಇನ್ನೂ ಒಂದು ವಾರ ಕೂಡ ಆಗಿರಲಿಲ್ಲ.

ಸುಮತಿಯನ್ನು ನೋಡಿದಂದಿನಿಂದ ನನ್ನ ಮನಸ್ಸು ಅವಳ ಕಡೆಗೆ ಒಲಿ

ದಿತ್ತು. ಅವಳು ಒಟ್ಟಿನಲ್ಲಿ ಚೆಲುವೆ ಎಂದರೆ ಸಾಕು. ನಮ್ಮ ಕಡೆಯ ಹುಡುಗಿಯರಿಗಿಲ್ಲದ ಬಿಂಕಬಿನ್ನಾಣಗಳು ಬೇರೆ ಅವಳ ರೂಪಿಗೆ ಒಂದು ಬಣ್ಣ ಕೊಟ್ಟಿದ್ದುವು. ಅವಳು ಸೀರೆ ಉಡುತ್ತಿದ್ದ ಝೋಕೆ ಒಂದು ಬಗೆ; ಅವಳ ಕುಪ್ಪಸದ ಬಗೆಯೇ ಬೇರೆ; ಅವಳ ಹೆರಳಿನ ಸೊಬಗು—ನಮ್ಮ ಕಡೆ ಇಲ್ಲ; ಅವಳ ನಡಿಗೆಯ ಠೀವಿ—ಅದೊಂದು ಬಗೆ. ಸಾಕು ಇಷ್ಟು.

'ಸಾಕಪ್ಪ ಸಾಕು. ಆ ಮೇಲೆ?' ಎಂದು ರಾಜ ಕಥೆಯಲ್ಲಿ ಸ್ವಲ್ಪ ಕುತೂಹಲವನ್ನು ತೋರಿಸಿದ. ನಾನೂ ಸ್ವಲ್ಪ ಉತ್ಸಾಹದಿಂದ ಓದ ತೊಡಗಿದೆ.

—ಸುಮತಿಯ ಕೂಡ ಮಾತನಾಡಬೇಕು ಎನಿಸಿತ್ತು ನನಗೆ. ಸರಿ, ಅವಳಲ್ಲಿ ಪ್ರೇಮ ಹುಟ್ಟಿತು ನನಗೆ ಎಂದು ಯಾರೂ ಊಹಿಸಬೇಕಾಗಿಲ್ಲ. ಮೊದಲು ನೋಟ, ಕಡೆಗಣ್ಣಿನ ನೋಟ; ಆಮೇಲೆ ಮಾತು, ಒಂದೇ ಒಂದು ಮಾತು; ಆಮೇಲೆ..ಪ್ರೇಮ, ಅಪಾರ ಪ್ರೇಮ—ಈ ಕಥೆ ಇದ್ದೇ ಇದೆ ಎನ್ನಬೇಡಿ. ಆಮೇಲಿನ ಪ್ರೇಮದ ವಿಷಯವನ್ನು ನಾನು ಯೋಚಿಸಿರಲಿಲ್ಲ. ಅವಳೊಡನೆ ಸುಮ್ಮನೆ ಮಾತನಾಡಬೇಕೆನಿಸಿತ್ತು, ಅಷ್ಟೆ.

ಇರಲಿ. ನಾನು ಬಿದ್ದದ್ದನ್ನು ನೋಡಿ ಸುಮತಿ ನಕ್ಕಳು ಎಂದು ಹೇಳಿದೆ. ಸ್ವಲ್ಪ ಹೊತ್ತು, ಒಂದು ಕ್ಷಣ ಮಾತ್ರ ಕಿಲಕಿಲನೆ ನಕ್ಕಳು. ನಾನು ಬಿದ್ದವನು ಮೈಕೈಮುಟ್ಟಿ ನೋಡಿಕೊಂಡೆ. ಸ್ವಲ್ಪ—ನಾಚಿಕೆಯೇನು !—ಪೆಟ್ಟಾಗಿತ್ತು. ಅವಳ ಮುಖವನ್ನು ಒಂದು ಸಲ ನೋಡಿದೆ. ಆಗ ಮಾತ್ರ ನಾಚಿಕೆಯಾಯಿತು. ತಲೆ ತಗ್ಗಿಸಿದೆ.

ಸೀಬೆಯ ಹಣ್ಣು ಉರುಳಿ ಹೋಗಿ ಅವಳ ಬಳಿ ಬಿದ್ದಿತ್ತು. ಅವಳದನ್ನು ಹಿಡಿದುಕೊಂಡು ನನ್ನ ಬಳಿಗೆ ಬಂದಳು. ನಾನೂ ಎದ್ದು ನಿಂತುಕೊಂಡು, ಬಟ್ಟೆಯ ಧೂಳು ಕೊಡವಿಕೊಂಡು, ಕ್ರಾಪು ಸರಿಮಾಡಿಕೊಂಡು ಅವಳನ್ನೇ ನೋಡುತ್ತಾ ನಿಂತೆ. ನೋವು ಮಾಯವಾಗುತ್ತ ಬಂದಿತು.

ಆಗ ಅವಳು ನಗುತ್ತಿರಲಿಲ್ಲ. ಅವಳ ಮುಖದಲ್ಲಿ ಹಾಸ್ಯ ಮಾತ್ರಬೇಕೆಂ ದಿದ್ದ ಕುರುಹಿರಲಿಲ್ಲ; ಅದಕ್ಕೆ ಬದಲು ಅಪಾರವಾದ ಮರುಕ ತುಂಬಿದ್ದಿತು. ಅವಳ ಕಣ್ಣುಗಳು 'ಅಯ್ಯೋ ಪಾಪ' ಎನ್ನುವಂತಿದ್ದುವು.

ನಾನು ಇನ್ನೂ ಸುಮ್ಮನೇ ನಿಂತಿದ್ದೆ. ಏನು ಹೇಳುವುದಕ್ಕೂ

ತೋಚದೆ ನಿಂತಿದ್ದೆ. ಸುಮತಿ ಎರಡು ಹೆಜ್ಜೆ ಮುಂದೆ ಬಂದು ಹಣ್ಣನ್ನು ನೀಡಿದಳು.

ನಾನು ಹಣ್ಣು ತೆಗೆದುಕೊಳ್ಳುವುದಕ್ಕೆಂದು ಅರ್ಧ ಕೈ ನೀಡಿದೆ. ಆದರೆ ಹಣ್ಣನ್ನು ತೆಗೆದುಕೊಳ್ಳಲಿಲ್ಲ. ಹಿಂಜರಿಯುತ್ತಾ,ಹಿಂಜರಿಯುತ್ತಾ, ಅಂಜುತ್ತಾ ಅಂಜುತ್ತಾ ಹಣ್ಣಿನ ಸಮೇತ ಅವಳ ಕೈಹಿಡಿದುಕೊಂಡೆ.

ಆಗ—ಅವಳ—ಹೆಸರು ಗೊತ್ತಿರಲಿಲ್ಲ ನನಗೆ. ಅವಳ ಹೆಸರು ಗೊತ್ತಿದ್ದರೆ ಬಾಯಿ ತುಂಬಾ 'ಸುಮತೀ' ಎನ್ನುತ್ತಿದ್ದೆ. ಆದರೆ ಏನು ಮಾಡಲಿ—ಸ್ವಲ್ಪ ಹೊತ್ತು ಮೌನವಾಗಿದ್ದೆ. ಅವಳೂ ಮೌನವಾಗಿದ್ದಳು. ಆದರೆ ಇಬ್ಬರ ಕಣ್ಣುಗಳೂ ಸೇರಿದ್ದುವು.

ಅವಳ ಮನೆಯೊಳಗಿನಿಂದ ಅವರಜ್ಜಿ 'ಸುಮತೀ' ಎಂದು ಕೂಗಿದರು. ಆ ಹೆಸರು ಮೊದಲು ಸಲ ಕಿವಿಗೆ ಬಿದ್ದುದು ಅಂದೇ. ಅವಳು ಕೈಬಿಡಿಸಿಕೊಂಡು ಹೋಗಬೇಕೆಂದು ಯತ್ನಿಸಿದಳು. ಆಗ ಹಣ್ಣು ಕೆಳಗೆ ಬಿತ್ತು. ಅವಳು ಹೋಗುವುದರಲ್ಲಿದ್ದಳು. ನಾನು ಹಣ್ಣನ್ನು ತೆಗೆದು ಅವಳಿಗೆ ಕೊಡುವುದಕ್ಕೆ ಹೋದೆ. ಸ್ವಲ್ಪ ಹೊತ್ತು ಸುಮ್ಮನಿದ್ದು, ಅದನ್ನು ಸ್ವೀಕರಿಸಿ ಓಡಿದಳು. ನಾನು ಅಲ್ಲಿಯೇ ಸ್ವಲ್ಪ ಹೊತ್ತು ಅವಳು ಹೋದ ಕಡೆಯೇ ನೋಡುತ್ತ ನಿಂತಿದ್ದು, ಗೋಡೆ ಹತ್ತಿ ನಮ್ಮ ಹಿತ್ತಿಲಿಗೆ ಬಂದೆ. ಕತ್ತಲೆ ಹೆಚ್ಚುತ್ತಾ ಬಂದಿತ್ತು.

ಮಾರನೆಯ ದಿವಸದಿಂದ ಸಂಜೆಯ ಹೊತ್ತು ನೀಬೆಯ ಮರವನ್ನು ಹತ್ತುವುದಕ್ಕೆ ಮೊದಲು ಮಾಡಿದೆ. ಹಣ್ಣಿಗಾಗಿ ಅಲ್ಲ, ಸುಮತಿಗಾಗಿ.

ನಾನು ಮರ ಹತ್ತುವ ಹೊತ್ತಿಗೆ ಸರಿಯಾಗಿ ಅವಳೂ ತಪ್ಪದೆ ಹಿತ್ತಿಲಿಗೆ ಬರುತ್ತಿದ್ದಳು. ಅವಳನ್ನು ನೋಡಿ ನಾನು ಮುಗುಳುನಗೆಯನ್ನು ಚೆಲ್ಲುತ್ತಿದ್ದೆ; ಅವಳೂ ನನ್ನ ಕಡೆಗೆ ನೋಡಿ ತಿಳಿನಗೆಯ ಚೆಲುವೆಯನ್ನು ಸೂಸುತ್ತಿದ್ದಳು.

ಒಂದು ದಿವಸ ಧೈರ್ಯಮಾಡಿ, ಮರದಿಂದ ಅವಳ ಮನೆಯ ಹಿತ್ತಿಲಿಗೆ ಧುಮುಕಿ, ಅವಳ ಬಳಿ ನಿಂತೆ.

'ಸುಮತಿ' ಎಂದೆ.

'ಆಂ' ಎಂದಳು.

'ನನ್ನನ್ನು ಪ್ರೀತಿಸುತ್ತೀಯಾ?' ಎಂದೆ; ಸುಮ್ಮನಿದ್ದಳು.

'ನೋಡು, ನಾನು ನಿನ್ನನ್ನು ಪ್ರೀತಿಸುತ್ತೇನೆ. ನೀನು ನನ್ನನ್ನು ಪ್ರೀತಿಸುವುದಿಲ್ಲವೇ?' ಎಂದು ಮತ್ತೆ ಕೇಳಿದೆ.

ಮತ್ತೆ ಮಾತಿಲ್ಲ.

'ಅದೇಕೆ? ಮಾತಾಡುವುದಿಲ್ಲವೆ? ಹೆದರಿಕೆಯೋ?' ಎಂದು ಕೇಳಿದೆ.

ಇನ್ನೂ ಮೌನ.

'ಹೋಗಲಿ ಬಿಡು' ಎಂದು ಅವಳ ಕೆನ್ನೆಯ ಮೇಲೆ ಒಂದು ಮುತ್ತು ಒತ್ತಿದೆ. ಸುಮ್ಮನಿದ್ದಳು.

ಅವಳ ಮುಖದಲ್ಲಿ ಅಸಮಾಧಾನವಿರಲಿಲ್ಲ, ಕೋಪವಿರಲಿಲ್ಲ; ತೃಪ್ತಿಯಿತ್ತು, ಸಮ್ಮತಿಯ ಸೂಚನೆಯಿತ್ತು. ಇದ್ದಕ್ಕಿದ್ದ ಹಾಗೆ ತಲೆ ಬಗ್ಗಿಸಿಕೊಂಡು ಹೊರಟು ಹೋದಳು. ಒಮ್ಮೆ ಹಿಂದಿರುಗಿ ನೋಡಿ ಮನೆಯೊಳಕ್ಕೆ ಹೋದಳು. ನಾನು ಹೊರಟು ಬಂದೆ.

ಮರುದಿವಸವೂ ಅದರ ಮಾರನೆಯ ದಿವಸವೂ ಸುಮತಿ ಎಂದಿನಂತೆ ಕಾಣಿಸಿಕೊಳ್ಳಲಿಲ್ಲ. ಆ ತರುವಾಯ ಎರಡು ದಿವಸಗಳ ಮೇಲೆ ಅವಳೂ ಅವಳ ಅಜ್ಜಿಯೂ ಮನೆ ಬಿಟ್ಟು ಹೊರಟು ಹೋಗಿದ್ದರು.

ಬೇರೆ ಮನೆಗೆ ಹೋದರೋ, ಎಲ್ಲಿಗೆ ಹೋದರೋ ಗೊತ್ತಾಗಲಿಲ್ಲ. ಸುಮತಿ, ಅವಳ ಅಜ್ಜಿ ಮನೆ ಬಿಟ್ಟು ಎಲ್ಲಿಗೆ ಹೋದರಮ್ಮ—ಎಂದು ನಮ್ಮ ತಾಯಿಯನ್ನು ಕೇಳಿದೆ.

'ಅದೆಲ್ಲಾ ಕಟ್ಟಿಕೊಂಡು ನಿನಗೇನು?' ಎಂದುಬಿಟ್ಟರು ನನ್ನ ತಾಯಿ.

'ಏನೂ ಇಲ್ಲ. ಹಾಗೆ ಬಂದರು, ಹೀಗೆ ಹೊರಟುಹೋದರು; ಯಾಕೆ?' ಎಂದು ಕೇಳಿದೆ.

ನಮ್ಮ ತಾಯಿಯಿಂದ ಸ್ವಲ್ಪ ವಿಷಯ ಗೊತ್ತಾದ ಹಾಗೆ ಆಯಿತು. ಇದ್ದಕ್ಕಿದ್ದ ಹಾಗೆ ಹೊರಟು ಬನ್ನಿ ಎಂದು ಮಗನಿಂದ ಕಾಗದ ಬಂತಂತೆ. ಭಾಗೀರಥಮ್ಮನವರು ಮೊಮ್ಮಗಳನ್ನೂ ಕರೆದುಕೊಂಡು ಹೊರಟು ಬಿಟ್ಟರಂತೆ.

ಸುಮತಿ ತಾಯಿಯಿಲ್ಲದ ತಬ್ಬಲಿ. ಈ ವಿಷಯ ಕೇಳಿ ನನಗೆ ಬಹಳ ವ್ಯಸನವಾಯಿತು. ಈ ವಿಷಯ ನನಗೆ ಮೊದಲೇ ಗೊತ್ತಿದ್ದು ನನಗೆ ಹಿಂದೀ

ಬರುತ್ತಿದ್ದರೆ? ಅಥವಾ ಅವಳಿಗೆ ಕನ್ನಡವೂ ಬರುತ್ತಿದ್ದರೆ? ಎಂದುಕೊಂಡೆ.

ನನ್ನ ಮಾತು ಅವಳಿಗೆ ಹೇಗೆ ಅರ್ಥವಾಗಬೇಕು? ಅದಕ್ಕೇ ಅವಳು ನಾನು ಏನು ಕೇಳಿದರೂ ಮಾತನಾಡದೆ ಮೌನವಾಗಿ ನಿಂತಿದ್ದುದು. ಮಾತನಾಡದಿದ್ದರೇನು? ನನ್ನ ಹೃದಯವನ್ನು ಅರ್ಥಮಾಡಿಕೊಂಡಳು.

ಅವಳು ಯಾರೋ ನಾನು ಯಾರೋ? ಅವಳ ಮೇಲೆ ನನಗೇಕೆ ಹುಚ್ಚು ಹಿಡಿಯಿತು—ಎಂದೆನಿಸಿತು ಆಮೇಲೆ.

Love is blind: ಪ್ರೇಮವು ಏನನ್ನೂ ಗಣಿಸುವುದಿಲ್ಲ; ಪ್ರೇಮಕ್ಕೆ ಕಣ್ಣಿಲ್ಲ.

'ಕಥೆ ಹೇಗಿದೆ, ರಾಜ?' ಎಂದೆ.

'ಏನೋ ಇದೆ. Stereotyped. ಹೇಳಿದ್ದೇ ಹೇಳೋದು. ಒರೆದದ್ದೇ ಬರೆಯೋದು. Very artificial, conventional. ಸ್ವಾಭಾವಿಕವಾಗಿಲ್ಲ.'

'ನಡೆದ ಸಂಗತಿ ಕಾಣೋ ರಾಜ. ಸ್ವಾನುಭವ.'

'ಓಹೋ!. ಹಾಗೋ. ಹಾಗಾದರೆ ಇದು ಕಥೆಯೇ ಅಲ್ಲ.'

'ಮತ್ತೆ?'

'ಕಥೆ ಅಂದರೆ ಅದರ ವಿಷಯ ನಡೆದದ್ದಾಗಿರಕೂಡದು. ಕಾಲ್ಪನಿಕವಾದರೂ ನಡೆದ ಹಾಗಿರಬೇಕು.'

'ಅಂಥ ಕಥೆಯನ್ನು ನೀನೊಂದು ಬರೆದು ನನಗೆ ತೋರಿಸುವೆಯಂತೆ, ಅದಿರಲಿ. ನಿಜವಾಗಿಯೂ ಕಥೆ ಹೇಗಿದೆ ಹೇಳು?' ಎಂದು ಕೇಳಿದೆ.

'ಕೊನೆಯಲ್ಲಿ ಇನ್ನೊಂದು ವಾಕ್ಯ ಸೇರಿಸಿದರೆ ಮೇಲಲ್ಲವೆ?' ಎಂದು ಕೇಳಿದ.

'ಏನೋ?' ಎಂದೆ.

'Love is dumb,' ಪ್ರೇಮ ಮೂಕ ಎಂತ ಒಂದು ವಾಕ್ಯ ಸೇರಿಸು. ನಿನ್ನ ಕಥೆ ಅರ್ಥಪೂರ್ತಿಯಾಗುತ್ತೆ' ಎಂದು ಸೂಚಿಸಿದ ರಾಜ.

ನಾನು ನಕ್ಕೆ; ಆದರೆ ಒಳಗೆ ಸುಮತಿಯ ನೆನಪು ಹೃದಯವನ್ನು ಇರಿಯುತ್ತಿತ್ತು.

'ಹೌದು ರಾಜ. ನೀನು ಹೇಳಿದ್ದು ನಿಜ' ಎಂದೆ.

# ಪ್ರೇಮಪರೀಕ್ಷೆ   

' ರುಕ್ಕೂ, ನೀನು ನನ್ನ ಪ್ರೀತಿಸುತ್ತೀಯೋ ಇಲ್ಲವೆ ? '

ರುಕ್ಕು ಮಾತನಾಡಲಿಲ್ಲ. ಟವಲಿನ ಅಂಚು ಕಟ್ಟುತ್ತಲೇ ಕುಳಿತಿದ್ದಳು.

' ಹೇಳ್ತೀಯೋ ಹೇಳೋದಿಲ್ವೊ ? ' ಎಂದು ಮಾಧು ಮತ್ತೆ ಪೀಡಿಸಿದ.

ರುಕ್ಮಿಣಿ ಯಾವಾಗಲೂ ಗಂಡನ ಮಾತಿಗೆ ಪ್ರತಿಯಾಡಿದವಳಲ್ಲ. ಅವಳು ಎಂದೂ ಅವನ ಮನಸ್ಸು ನೋಯಿಸಿರಲಿಲ್ಲ. ಆದರೆ ಮಾಧು ಮತ್ತೆ ಮತ್ತೆ ಕೇಳುತ್ತಿದ್ದ. ಈ ಒಂದು ಪ್ರಶ್ನೆಗೆ ಉತ್ತರ ಹೇಳಿ ಹೇಳಿ ಅವಳಿಗೂ ಬೇಸರವಾಗಿತ್ತು. ಆದರೆ ಮಾಧುವಿಗೇನೋ ಬೇಸರವಾಗಿರಲಿಲ್ಲ; ರುಕ್ಮಿಣಿಯನ್ನು ಮೊದಲನೆಯ ಸಲ ಮನೆಗೆ ಕರೆದುಕೊಂಡು ಒಂದು ಮೂರು ತಿಂಗಳಾಗಿತ್ತು, ಅಷ್ಟೆ.

ಮಾಧೂ ಇನ್ನೊಂದು ಸಲ ಕೇಳಿದಾಗ ರುಕ್ಮಿಣಿ ತುಟಿಯನ್ನು ಕೊಂಕಿಸಿ, ' ಹೂಂ ' ಎಂದು, ಮುಗುಳು ನಗೆ ಬೀರಿದಳು.

ಮಾಧು ಕೈಲಿ ಹಿಡಿದಿದ್ದ ಪುಸ್ತಕವನ್ನು ಮೇಜಿನ ಮೇಲಿಟ್ಟು, ಕುರ್ಚಿಯನ್ನು ಬಿಟ್ಟೆದ್ದು, ಹೆಂಡತಿಯ ಪಕ್ಕದಲ್ಲಿ ಬಂದು ಕುಳಿತು ಅವಳ ಕೈಹಿಡಿದುಕೊಂಡ.

' ನಾನು ಚೆನ್ನಾಗಿದ್ದೇನೇನೆ ? ' ಎಂದು ಮತ್ತೆ ಕೇಳಿದ ಮಾಧು.

ತನ್ನ ಹೆಂಡತಿ ತನ್ನನ್ನು ಸಂಪೂರ್ಣವಾಗಿ ಪ್ರೀತಿಸುತ್ತಾಳೆಯೋ ಇಲ್ಲವೋ ಎಂದು ಮಾಧುವಿಗೇನೋ ಒಮ್ಮೊಮ್ಮೆ ಅನುಮಾನ ತಲೆದೋರುತ್ತಿತ್ತು. ತಾನು ಅಷ್ಟು ರೂಪವಂತನಲ್ಲವೆಂಬುದೇ ಆ ಅನುಮಾನಕ್ಕೆ ಕಾರಣ.

ಹಿಂದೆ ಎಷ್ಟೋ ಸಲ ' ನಾನು ಚೆನ್ನಾಗಿದೇನೇನೆ ' ಎಂದು ಕೇಳಿದಾಗ ರುಕ್ಮಿಣಿ ' ಚೆನ್ನಾಗಿದಿರಿ ' ಎಂದು ಹೇಳಿದ್ದಳು. ಆದರೆ ಅವಳ ಮಾತಿನಲ್ಲಿ ಅವ ನಿಗೆ ಪೂರ್ಣ ವಿಶ್ವಾಸವುಂಟಾಗುತ್ತಿರಲಿಲ್ಲ. ತಾನು ಕುರೂಪಿಯಲ್ಲದಿದ್ದರೂ ಸುರೂಪಿಯಲ್ಲವೆಂಬುದು ಅವನಿಗೆ ಗೊತ್ತಿತ್ತು; ಕನ್ನಡಿ ಆ ವಿಷಯವನ್ನು ಅವನಿಗೆ ಸ್ಪಷ್ಟಮಾಡಿತ್ತು. ಕ್ರಾಪು ಬಿಟ್ಟುಕೊಂಡರೆ ಇನ್ನು ಸ್ವಲ್ಪ ಚೆನ್ನಾಗಿ ಕಾಣುವನೇನೋ ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದ. ಅದ ಕ್ಕಾಗಿ ಸ್ವಲ್ಪ ಸನ್ನಾಹವನ್ನೂ ನಡಸುತ್ತಿದ್ದ; ಮುಂಜುಟ್ಟನ್ನು ಬೆಳೆಬಿಟ್ಟು ಸುಲಗ್ನಕ್ಕಾಗಿ ಕಾದುಕೊಂಡಿದ್ದ. ಅಮ್ಮ ಮಾತ್ರ ಅಷ್ಟಕ್ಕೆ ಹಾಯಗೊಡು ತ್ತಿರಲಿಲ್ಲ; ಆದರೆ ಈ ವಿಷಯದಲ್ಲಿ ಅಮ್ಮನ ಮಾತು ಮೀರುವುದೇ ಸಿದ್ಧ ಎಂದು ಅವನು ಮನಸ್ಸುಮಾಡಿಬಿಟ್ಟಿದ್ದ. ತಾನು ಕ್ರಾಪು ಬಿಟ್ಟರೆ ರುಕ್ಮಿಣಿ ತನ್ನನ್ನು ಇನ್ನೂ ಹೆಚ್ಚಾಗಿ ಮೆಚ್ಚಬಹುದೆಂದು ಅವನ ಭಾವನೆ. ಆದರೆ ರುಕ್ಮಿಣಿಯೇನೋ ಅವನನ್ನು ಸಂಪೂರ್ಣವಾಗಿ ಮೆಚ್ಚಿದ್ದಳು—ಅವನು ಕ್ರಾಪು ಬಿಡದಿರುವುದಾಗಲಿ, ಅವನ ಮೈಬಣ್ಣ ಸ್ವಲ್ಪ ಕಪ್ಪಗಿರುವುದಾಗಲಿ, ಅವನ ಹಲ್ಲು ಸ್ವಲ್ಪ ಉಬ್ಬಾಗಿರುವುದಾಗಲಿ, ಯಾವುದೂ ಅವಳ ಮನಸ್ಸಿಗೆ ವ್ಯಥೆಯನ್ನುಂಟುಮಾಡಿರಲಿಲ್ಲ; ಯಾವುದೂ ಅವಳ ಹೃದಯದಿಂದ ಹೊರಟ ಪ್ರೇಮವಾಹಿನಿಗೆ ಅಡ್ಡಿಯಾಗಿರಲಿಲ್ಲ. ತಾನು ಕೈಹಿಡಿದ ಗಂಡನನ್ನು ಪ್ರೀತಿಸ ಬೇಕೆಂಬ ನಿಯಮಬದ್ಧಳಾಗಿಯೂ ಅವಳು ಮಾಧುವನ್ನು ಪ್ರೀತಿಸುತ್ತಿರಲಿಲ್ಲ. ಮದುವೆಗೆ ಮುಂಚೆ ಮಾಧುವನ್ನು ನೋಡಿದಾಗ ಅವಳ ಹೃದಯವು ಅವ ನನ್ನು ಮೆಚ್ಚಿತು; ಮೆಚ್ಚಿ ಕೈಹಿಡಿದ ಗಂಡನನ್ನು ರುಕ್ಮಿಣಿ ಒಂದೇ ಸಮ ನಾಗಿ ಪ್ರೀತಿಸುತ್ತಿದ್ದಳು.

ಆದರೆ ಮೊದಲೇ ಹೇಳಿದಂತೆ ಮಾಧುವಿಗೇನೋ ಈ ವಿಷಯದಲ್ಲಿ ಸ್ವಲ್ಪ ಸಂದೇಹ : ಅಷ್ಟೊಂದು ಸುಂದರನಲ್ಲದ ತನ್ನನ್ನು ಹೇಗೆ ಮನಮುಟ್ಟಿ ತನ್ನ ಹೆಂಡತಿ ಪ್ರೀತಿಸಿಯಾಳು ಎಂದು ಅವನ ಸಂದೇಹ.

ಏಕೆಂದರೆ, ಅವನು ರುಕ್ಮಿಣಿಯನ್ನು ಪ್ರೀತಿಸುತ್ತಿದ್ದುದು ಅವಳ ರೂಪಿ ಗಾಗಿ. ಮದುವೆಗೆ ಮುಂಚೆ ರುಕ್ಮಿಣಿಯನ್ನು ನೋಡಿದಾಗ ಅವನ ಮನಸ್ಸು ಒಮ್ಮೆಲೇ ಅವಳನ್ನು ಒಪ್ಪಿಬಿಟ್ಟಿತು. ಹಿಂದೆ ಇಬ್ಬರುಮೂವರು ಹುಡುಗಿ ಯರನ್ನು ಒಪ್ಪದ ಮನಸ್ಸು ಅಂದು ರುಕ್ಮಿಣಿಯನ್ನು ಒಪ್ಪಿತು.

ರುಕ್ಮಿಣಿ ಒಟ್ಟಿನಲ್ಲಿ ಚೆಲುವೆ ಎಂದು ಹೇಳಿದರೆ ಸಾಕು. ಅವಳ ನಡೆ, ನುಡಿ, ವಿನಯ, ಲಜ್ಜೆ ಮುಂತಾದ ಸದ್ಗುಣಗಳು ಅವಳ ಚೆಲುವಿಗೊಂದು ಬಣ್ಣ ಕೊಟ್ಟಿದ್ದುವು. ರುಕ್ಮಿಣಿಗೆ ಈ ಸದ್ಗುಣಗಳೆಲ್ಲಾ ಇದ್ದು ಸದ್ರೂಪು ಒಂದಿಲ್ಲದಿದ್ದರೆ ಮಾಧು ಬೇರೆ ಅವಳನ್ನು ಪ್ರೀತಿಸುತ್ತಿರಲಿಲ್ಲ,—ಪ್ರೀತಿಸುವುದು ಹಾಗಿರಲಿ—ಕೈಹಿಡಿಯುತ್ತಿರಲಿಲ್ಲ.

ಮಾಧು 'ನಾನು ಚೆನ್ನಾಗಿದಿನೇನೆ' ಎಂದು ಕೇಳಿದ್ದಕ್ಕೆ ರುಕ್ಮಿಣಿ ಎಂದಿನಂತೆ 'ಚೆನ್ನಾಗಿದೀರಿ' ಎಂದಳು.

'ನಿಜವಾಗಿಯೂ!'

'ಹೋಗಿ ಅಂದ್ರೆ. ನನಗೂ ಬೇಜಾರಾಗಿ ಹೋಯಿತು. ಹತ್ತು ಸಲ ನೀವು ಚೆನ್ನಾಗಿದೀರಿ ಅಂದ್ರೆ ನಿಮ್ಮ ಚೆಲುವೇನಾದರೂ ಹೆಚ್ಚುತ್ತೆಯೋ? ಅಥವಾ ನೀವು ಚೆನ್ನಾಗಿಲ್ಲ ಅಂದ್ರೆ ನಿಮ್ಮ ಮುಖ ಏನಾದರೂ ಕೆಟ್ಟು ಹೋಗುತ್ತೆಯೋ? ಎಷ್ಟು ಸಲ ಬೇಕಾದರೂ ನನ್ನ ಚೆನ್ನಾಗಿಲ್ಲ ಅನ್ನಿ ನೀವು—ನನಗೇನೂ ಕೋಪ ಬರೋದಿಲ್ಲ; ನಾನು ಚೆನ್ನಾಗಿದೇನೆಯೆ ಅಂದ್ರೆ?'

'ಏನು ಜಂಭ ನಿನ್ನದು! ನಿನ್ನ ಹಾಗೇ ಉಬ್ಬಿಸಿಬಿಟ್ಟಿದೀನಿ ನಾನು. ನಿನ್ನ ಚೆನ್ನು ಅಷ್ಟರಲ್ಲೇ ಇದೆ' (ಮಾಧು ಮನಃಪೂರ್ವಕವಾಗಿ ಹೀಗೆ ಅಂದಿರಲಾರ; ಹೀಗೆ ಅಂದಿದ್ದರೂ ಒಳಗೊಳಗೇ ನೊಂದುಕೊಂಡಿರಬೇಕು ಹಾಗೆ ಅಂದದ್ದಕ್ಕಾಗಿ)

'ಏನೋ ಹೊಸ ವಿಷಯ ಕೇಳತಾ ಇದೀನಿ. ಏನು ಕಂಡಿರೋ ಇವತ್ತು ನನ್ನ ಮುಖದಲ್ಲಿ!' (ರುಕ್ಮಿಣಿ ರೂಪವತಿ; ತನ್ನ ರೂಪಿನ ವಿಷಯದಲ್ಲಿ ಅಭಿಮಾನವತಿಯಾಗಿರಕೂಡದೇಕೆ?)

ಮಾಧು ಒಡನೆಯೇ ನುಡಿದ: 'ಏನೇ! ನೋಡಿಕೊ, ಕೈಗೆ ಕನ್ನಡಿ ಕೊಡಲೇನು? ಮೂಗಿನ ಮೇಲೆ ಕಲೆ!'

'ಏನೋ ಬೊಕ್ಕೆ ಆಗಿತ್ತು. ಕೆರೆದೂ ಕೆರೆದೂ ಹಾಗಾಗಿದೆ.'

'ಅದು ಸರಿ.. ಗಲ್ಲದ ಮೇಲೆ ನೋಡಿಕೋ, ಸಾಸುವೆ ಕಾಳಿಗಿಂತ ದೊಡ್ಡದಾಗಿದೆ ಕಲೆ!'

'ಎಲ್ಲಿ?'

ಮಾಧು ಕನ್ನಡಿ ತೋರಿಸಿದ.

'ಅದು ಸಂಗಾತಿ (ಗೆಳತಿ) ಅಂದರೆ. ಎಡಗಡೆ ಇದೆ. ಬಹಳ ಪುಣ್ಯ ಅಂತೆ.' ಎಂದಳು ರುಕ್ಮಿಣಿ.

'ಏನು ಪುಣ್ಯವೊ. ನನಗೆ ಚೆನ್ನಾಗಿ ಕಾಣುವುದಿಲ್ಲ.'

ಅಷ್ಟು ಹೊತ್ತಿಗೆ ಮಾಧುವಿನ ತಾಯಿ ಒಳಗಿನಿಂದ ಬಂದರು; ಅಡಿಗೆ ಮಾಡುತ್ತಿದ್ದವರು ಸೌಟನ್ನು ಹಾಗೇ ಕೈಲಿ ಹಿಡಿದುಕೊಂಡೇ ಬಂದರು.

'ಏನೋ ಮಾಧೂ, ಇದು ಹೆಂಡತಿ ಕೈಲಿ ಜಗಳ. ಎಲ್ಲದರಲ್ಲೂ ಅಪ್ಪನ ಹಾಗೇ' ಎಂದರು ಪುಟ್ಟಮ್ಮನವರು.

'ಇಲ್ಲ ಅಮ್ಮ. ಜಗಳವೂ ಇಲ್ಲ, ಕದನವೂ ಇಲ್ಲ, ನಾನೇ ಚೆನ್ನೊ ಅಂತ ಜಂಭ ಕೊಚ್ಚಿಕೊಳ್ಳುತಾ ಇದ್ದಳು. ತೋರಿಸಿದೆ....'

'ಏನನ್ನ?'

'ಅವಳ ಗಲ್ಲದ ಮೇಲೆ ಇರುವ ಕಲೆಯನ್ನ. ಅದೇನೋ ಸಂಗಾತಿ ಯಂತೆ ಅದು; ಪುಣ್ಯವಂತೆ ಅಲ್ಲಿದ್ದರೆ.'

'ಅಷ್ಟೇ ತಾನೆ. ಸಂಗಾತಿ ಇದ್ದರೆ ಇನ್ನೂ ಲಕ್ಷಣ ಕಣೋ ಮಗೂ. ಅದು ದೃಷ್ಟಿಬೊಟ್ಟಿದ್ದ ಹಾಗೆ. ಇನ್ನೇನು ಒಗ್ಗರಣೆ ಹಾಕಾಯಿತು, ಊಟಕ್ಕೆ ಏಳು. ಆಫೀಸಿಗೆ ಹೊತ್ತಾಗಲಿಲ್ಲವೆ?'

ಮಾಧುವಿಗೆ ಹೊತ್ತೇ ಮರೆತುಹೋಗಿತ್ತು; ಅಲ್ಲಿಂದ ಎದ್ದವನೇ ಸ್ನಾನಕ್ಕೆ ಹೋದ.

ಮಾರನೆಯ ದಿವಸದಿಂದ ಮಾಧುವಿನ ಮನಸ್ಸಿಗೆ ರುಕ್ಮಿಣಿ ಇಮ್ಮಡಿ ಯಾದ ಸೊಗಸಿನಿಂದ ಕಾಣತೊಡಗಿದಳು.

* * * * *

ಮಾಧುವಿಗೆ ಕೆಲಸ ಸಿಕ್ಕಿ ಮೂರು ನಾಲ್ಕು ತಿಂಗಳಾಗಿತ್ತು, ಅಷ್ಟೆ. ಅವನ ತಂದೆಗೆ ಹದಿನೈದು ರೂಪಾಯಿ ಪೆನ್‌ಷನ್ ಬರುತ್ತಿತ್ತು. ಮಾಧುವಿಗೆ ಕೆಲಸ ಸಿಕ್ಕಿ ಅವನಿಗೂ ತಿಂಗಳಿಗೆ ೩೦ ರೂಪಾಯಿ ಬರುವ ಹಾಗಾದ ಮೇಲೆ ಕಷ್ಟಜೀವನ ತಪ್ಪಿತೆ ಹೊರತು ಸುಖಜೀವನ ಬಂದಿತ್ತೆಂದು ಹೇಳುವುದ ಕ್ಕಾಗುವುದಿಲ್ಲ. ಮಾಧು ತನ್ನ ಸ್ವಂತ ಖರ್ಚಿಗೆ ಸ್ವಲ್ಪ ಹಣ ಇಟ್ಟುಕೊಂಡು ಬಂದ ಸಂಬಳವನ್ನೆಲ್ಲ ತಂದೆಯ ಕೈಗೆ ತಂದು ಕೊಟ್ಟುಬಿಡುತ್ತಿದ್ದ. ಆ ಅಲ್ಪ

ಹಣವನ್ನು ಅವನು ದುಂದುವೆಚ್ಚ ಮಾಡುತ್ತಿರಲಿಲ್ಲ. ಅಲ್ಪ ಸ್ವಲ್ಪ ಖರ್ಚು ಮಾಡಿ ಉಳಿದದ್ದನ್ನು ಕೂಡಿಟ್ಟಿದ್ದ.

ಕೂಡಿಟ್ಟ ಹಣದಲ್ಲಿ ಹೆಂಡತಿಗೆ ಏನಾದರೂ ತಂದು ಕೊಡಬೇಕೆಂದು ಅವನ ಆಸೆ. ಆದರೆ ಏನು ಬೇಕೆಂದು ಕೇಳಿದರೂ ರುಕ್ಮಿಣಿ ತನಗೆ ಏನೂ ಬೇಡ, ಎಲ್ಲ ಇದೆ ಎನ್ನುತ್ತಿದ್ದಳು. ನಿಜವಾಗಿಯೂ ಅವಳಿಗೆ ಏನೂ ಬೇಕಾಗಿರಲಿಲ್ಲ. ತವರು ಮನೆಯಲ್ಲಿ ಒಳ್ಳೆ ಕಲಾಬತ್ತಿನ ಸೀರೆಗಳು, ಮಡಿಸೀರೆಗಳು, ರವಿಕೆ ಕಣಗಳು, ಕಣದ ರವಿಕೆಗಳು, ರೇಶ್ಮೆಯ ಬಟ್ಟೆಯ ರವಿಕೆಗಳು-ಎಲ್ಲವನ್ನೂ ಕೊಟ್ಟು ಕಳಿಸಿದ್ದರು. ಆದ್ದರಿಂದ ಮಾಧು ಏನು ಕೇಳಿದರೂ ಬೇಡ ಎನ್ನುತ್ತಿದ್ದಳು.

ಏನಾದರೂ ತಂದು ಕೊಡಬೇಕು, ಅವಳನ್ನು ಮೆಚ್ಚಿಸಬೇಕು, ತಾನು ಅವಳನ್ನು ಪ್ರೀತಿಸುತ್ತೇನೆ ಎಂಬುದನ್ನು ತೋರಿಸಬೇಕು ಎಂದು ಅವನ ಆಸೆ.

ಒಂದು ದಿವಸ ಆಫೀಸಿನಿಂದ ಬರುತ್ತಾ ಒಂದು 'ಸ್ನೋ ಬಾಟಲ್' ತೆಗೆದುಕೊಂಡು ಬಂದ; ('ಸ್ನೋ' ಎನುವುದು ಒಂದು ಬಗೆಯ ಸುಗಂಧ ದ್ರವ್ಯ. ಮುಖಕ್ಕೆ ಅದನ್ನು ಲೇಪಿಸುತ್ತ ಬಂದರೆ ಮುಖದಲ್ಲಿರುವ ಬೊಕ್ಕೆ ಮೊಡವೆ ಕಲೆ ಎಲ್ಲಾ ಮಾಯವಾಗಿ ಮುಖಕ್ಕೆ ಕಾಂತಿ ಬರುವುದೆಂದು ವ್ಯಾಪಾರಗಾರರ ಪ್ರಕಟನೆ. ಹಾಗಾಗುವದೆಂದು ಅನೇಕರ ನಂಬಿಕೆ, ಕೆಲವರ ಅನುಭವ. ಅದರ ಪ್ರಯೋಜನವನ್ನು ಹೊಂದಿ ತನ್ನ ಹೆಂಡತಿಯ ಮುಖಕ್ಕೆ ಹೆಚ್ಚು ಕಾಂತಿಯನ್ನು ತರಬೇಕೆಂದು ಮಾಧುವಿನ ಎಣಿಕೆ) 'ಸ್ನೋ' ತೆಗೆದುಕೊಂಡು ಬಂದು ರುಕ್ಮಿಣಿಗೆ ಕೊಟ್ಟ. ರುಕ್ಮಿಣಿ 'ಇದು ಏಕೆ?' ಎಂದು ಕೇಳಿದಾಗ 'ನಿನ್ನ ಕೆನ್ನೆಯ ಮೇಲೆ ಮೊಡವೆ ಕಲೆ ಇದೆಯಲ್ಲ ಅದನ್ನು ಹೋಗಿಸುವುದಕ್ಕೆ' ಎಂದ. ರುಕ್ಮಿಣಿ ನಕ್ಕಳು. 'ನನಗೆ ಬೇಡ' ಎಂದಳು. ಮಾಧು ಅಸಮಾಧಾನಪಟ್ಟುಕೊಂಡ. ರುಕ್ಮಿಣಿ ಗಂಡನ ಮನಸ್ಸನ್ನು ನೋಯಿಸಬಾರದೆಂದು 'ಆಗಲಿ ಕೊಡಿ, ಹಚ್ಚಿಕೊಳ್ಳುತ್ತೇನೆ' ಎಂದು ಅದನ್ನು ತೆಗೆದಿಟ್ಟುಕೊಂಡಳು.

ದಿನ ಕಳೆದಂತೆ ರುಕ್ಮಿಣಿಯ ಕೆನ್ನೆಯ ಮೇಲಿದ್ದ ಅಲ್ಪ ಸ್ವಲ್ಪ ಕಲೆ ಮಾಯವಾಗುತ್ತ ಬಂದಿತು. ಅವಳ ಮುಖದಲ್ಲಿ ಕಾಂತಿ ಏರುತ್ತ ಬರುತ್ತಿರುವಂತೆ ಮಾಧುವಿಗೆ ತೋರಿತು. ಅವಳ ನೀಳವಾದ ಮೃದುವಾದ ಕರಿ

ಕುರುಳಿಗೆ ಕೊಬ್ಬರಿಎಣ್ಣೆಯ ಅವಶ್ಯಕತೆ ತೋರಿತು ಮಾಧುವಿಗೆ. ಅದನ್ನೂ ತಂದು ಕೊಟ್ಟ.

ಸ್ವಲ್ಪ ಕಾಲವಾದ ಮೇಲೆ ತನ್ನ ರೂಪನ್ನು ತಿದ್ದಿಕೊಳ್ಳುವ ಅವಶ್ಯಕತೆ ಅವನಿಗೆ ಕಂಡು ಬಂದಿತು.

ಒಂದು ದಿವಸ—' ರುಕ್ಕೂ, ನಾನು ಕ್ರಾಪು ಬಿಡಿಸಿಕೊಂಡರೆ ಚೆನ್ನಾಗಿರುತ್ತೆ ಅಲ್ಲವೇನೇ ? ' ಎಂದು ಕೇಳಿದ.

' ಈವಾಗ ಚೆನ್ನಾಗಿಲ್ಲದೆ ಇರುವುದೇನು, ಕ್ರಾಪೂ ಬೇಡ ಗೀಪೂ ಬೇಡ ' ಅಂದುಬಿಟ್ಟಳು ರುಕ್ಮಿಣಿ. ಕ್ರಾಪಿನ ಮೇಲೆ ಅವಳಿಗೆ ಅಭಿಮಾನ ಕಡಿಮೆ ಎಂದು ತೋರುತ್ತೆ. ಏಕೆಂದರೆ ಅವಳ ತಂದೆ ಹಿಂದಿನಕಾಲದ ವೈದಿಕರಲ್ಲದಿದ್ದರೂ ಸಿಷ್ಟರಾದ ಮನೆತನದವರು. ಅವಳ ಅಣ್ಣ ತಮ್ಮಂದಿರಾರೂ ಕ್ರಾಪುಗೀಪು ಬಿಟ್ಟಿರಲಿಲ್ಲ. ಅಲ್ಲದೆ ನವನಾಗರಿಕತೆಯ ಗಾಳಿಯಾವರೂ ಅವಳ ಮೇಲೆ ಬೀಸಿರಲಿಲ್ಲ. ಗಂಡಸರಿಗೆ ಕ್ರಾಪು ಸೌಂದರ್ಯವರ್ಧಕವೆಂದು ಅವಳು ತಿಳಿದುಕೊಂಡಿರಲಿಲ್ಲ.

೨

ಕೆಲವು ತಿಂಗಳು ಕಳೆದುವು. ರುಕ್ಮಿಣಿಯನ್ನು ತವರು ಮನೆಗೆ ಕರೆದುಕೊಂಡು ಹೋದರು. ಮಾಧುವಿಗೆ ಒಂದೊಂದು ದಿವಸ ಕಳೆಯುವುದೂ ಒಂದೊಂದು ಯುಗ ಕಳೆದಹಾಗಿದ್ದಿತು. ಎರಡು ತಿಂಗಳಾದರೂ ಮಾವನವರು ಬಾ ಎಂದು ಕಾಗದ ಬರೆಯಲಿಲ್ಲ. ಕಾಗದಗಳನ್ನೇನೋ ಬರೆಯುತ್ತಿದ್ದರು, ಆದರೆ ಆಹ್ವಾನವಿಲ್ಲ. ಹೆಂಡತಿಯಿದ್ದಾಗ ಮನೆಗೆ ಬೇಗ ಬಂದು ಬಿಡುತ್ತಿದ್ದ. ಈಗ ಹೊತ್ತುಗೊತ್ತಿಲ್ಲದೆ ಎಲ್ಲೆಲ್ಲೋ ಅಲೆಯುತ್ತಿದ್ದ. ಎಲ್ಲೋ ಊರಾಚೆ ಹೋಗಿ ಒಂದು ಮರದ ಕೆಳಗೇ ಕುಳಿತುಬಿಡುತ್ತಿದ್ದ. ಹೀಗೆ ಕೆಲವು ದಿವಸ ನಡೆಯಿತು. ಆಮೇಲೆ ಸ್ನೇಹಿತರುಗಳೊಡನೆ ಕಾಡು ಹರಟೆ ಮೊದಲಾಯಿತು. ಗೆಳೆಯರ ಮನೆಗೆ ಹೋಗಿ ಅವರೊಡನೆ ಹರಟೆ ಹೊಡೆಯುತ್ತಾ ಕುಳಿತುಬಿಡುತ್ತಿದ್ದ. ಹೆಂಡತಿಯನ್ನು ಬಿಟ್ಟಿರಲಾರದ ನೋವನ್ನು ಮರೆಯುವುದಕ್ಕೆ ಹೀಗೆ ಮಾಡುತ್ತಿದ್ದನೆಂದು ಊಹಿಸಬೇಕಾಗಿದೆ.

* * * * *

ಒಂದು ಭಾನುವಾರ ಸಂಜೆ ಸೂರಿಯ ಮನೆಯ ಕಡೆಗೆ ಹೊರಟ.

ಸೂರಿ— ಸೂರ್ಯನಾರಾಯಣರಾವ್; ಮಾಧುವಿನ ಸಹಪಾಠಿ. ಇವ ನಂತೆಯೆ ಎಲ್ಲೊ ಒಂದು ಕಡೆ ಗುಮಾಸ್ತೆಯ ಕೆಲಸದ ಮೇಲಿದ್ದ.

ಸೂರಿಗೆ ಕೆಲಸವಾದ ಮೇಲೆ ಮನೆಮಾಡಿ ಹೆಂಡತಿ ಕರಸಿಕೊಂಡಿದ್ದ. ಸೂರಿ ಮನೆ ಮಾಡಿದ ಮೇಲೆ ಮಾಧು ಒಂದು ದಿನವೂ ಅವನ ಮನೆಗೆ ಹೋಗಿರಲಿಲ್ಲ.

ಸೂರಿ ಬೀದಿಯಲ್ಲಿ ಸಿಕ್ಕು ಮನೆಯ ಕಡೆ ಬಾ ಎಂದು ಕರೆದರೆ, 'ಇಲ್ಲ ಸೂರಿ, ಹೊತ್ತಾಗುತ್ತೆ. ಮನೆಯಲ್ಲಿ ಅಮ್ಮ ಕಾದಿರುತ್ತಾರೆ' ಎಂದು ಹೇಳಿ ಬೀಳ್ಕೊಂಡುಬಿಡುತ್ತಿದ್ದ. ಹೆಂಡತಿ ಮನೆಯಲ್ಲಿದ್ದಾಗ ಮನೆಯ ಕಡೆಗೆ ಕಾಲು ಹಾಗೆ ಎಳೆಯುತ್ತಿದ್ದುವು.

ಈಗ ಹೆಂಡತಿ ಊರಲ್ಲಿರಲಿಲ್ಲ. ಸೂರಿ ಮನೆಯ ಕಡೆಗೆ ಬಾ ಎಂದೊಡನೆಯೇ 'ಮನೆ ಎಲ್ಲಿ ಮಾಡಿದ್ದೀ?' ಎಂದು ಕೇಳಿದ. ಸೂರಿ ಮನೆಯ ಗುರುತು ಹೇಳಿದ ಮೇಲೆ, ಆಗಲಿ ಎಂದು ಒಪ್ಪಿಕೊಂಡಿದ್ದ.

ಭಾನುವಾರ ಸಂಜೆ ಮಾಧು ಸೂರಿಯ ಮನೆಯ ಗುರುತು ಹಿಡಿದುಕೊಂಡು ಹೊರಟ. ಮನೆ ಸಿಕ್ಕುವುದು ಕಷ್ಟವಾಗಲಿಲ್ಲ.

ಆಗ ತಾನೇ ಸೂರ್ಯ ಮುಳುಗುತ್ತಿತ್ತು. ಬೀದಿಯ ಸಾಲುಮನೆಗಳ ಸುಣ್ಣದ ಗೋಡೆಗಳ ಮೇಲೆ ಸಂಜೆಯ ಕೆಂಬೆಳಗು ಬೆಳಗುತ್ತಿತ್ತು.

ಮಾಧು ಒಂದು ಮನೆಯ ಮುಂದೆ ನಿಂತು 'ಸೂರ್ಯನಾರಾಯಣರಾವ್' ಎಂದು ಕೂಗಿದ. ಮನೆಯ ಮುಂಬಾಗಿಲು ತೆರೆದಿತ್ತು. ಯಾರೂ ಮಾತನಾಡಲಿಲ್ಲ.

ಮಾಧು ಇನ್ನೊಮ್ಮೆ ಕೂಗಿದ. ಹುಡುಗಿಯೊಬ್ಬಳು ಒಳಬಾಗಿಲನ್ನು ತೆಗೆದುಕೊಂಡು ಬಂದು ಮುಂಬಾಗಿಲ ಒಳಿ, ಬೀಳುತ್ತಿದ್ದ ಕೆಂಬಳಕಿನಲ್ಲಿ ಒಂದು ನಿಂತಳು.

'ಸೂರ್ಯನಾರಾಯಣರಾವ್ ಇಲ್ಲವೆ?' ಎಂದು ಕೇಳಿದ ಮಾಧು.

'ಇಲ್ಲ' ಎಂದು ಚೆಲುವೆಯಾದ ಆ ಯೌವನೆ ಉತ್ತರಕೊಟ್ಟಳು.

'ಇಲ್ಲವೆ?' ಎಂದು ಮತ್ತೆ ಕೇಳಿದ.

'ಇಲ್ಲ. ಎಲ್ಲೋ ಹೊರಕ್ಕೆ ಹೋಗಿದ್ದಾರೆ. ಈಗ ತಾನೆ ಹೋದರು.' ಮಾಧು ಮೂರು ಹೆಜ್ಜೆ ಮುಂದೆ ಹೋಗಿ, ಮತ್ತೆ ಹಿಂದಿರುಗಿದ.

ಆ ಚೆಲುವೆಯ ಮುಖವನ್ನು ಮತ್ತೊಮ್ಮೆ ನೋಡಬೇಕೆಂದೆನಿಸಿತು ಮಾಧುವಿಗೆ. ಎಷ್ಟು ಮೂಢ ತಾನು? ಲೋಕದಲ್ಲಿ ತನ್ನ ಹೆಂಡತಿಯನ್ನು ಬಿಟ್ಟರೆ ಇನ್ನು ಚೆಲುವೆಯರಿಲ್ಲವೆಂದು ಭಾವಿಸಿಕೊಂಡಿದ್ದ. ಇಂದು ಆ ಭಾವನೆ ಹಾರಿಹೋಯಿತು. ಚೆಲುವಿಗೆ ಮಿತಿಯಿಲ್ಲ, ಕೊನೆಯಿಲ್ಲವೆಂಬಂತೆ ತೋರಿತವನಿಗೆ. ತನ್ನ ಹೆಂಡತಿಗಿಂತಲೂ ಸೂರಿಯ ಹೆಂಡತಿ ಇಮ್ಮಡಿ ಚೆಲುವೆ ಯೆಂಬಂತೆ ಕಂಡಿತವನಿಗೆ. ಸಂಜೆಯ ರಾಗದಲ್ಲಿ ಎಷ್ಟು ಕೆಂಪಾಗಿ, ಸರಾಗ ವಾಗಿ ಕಾಣುತ್ತಿದ್ದಾಳೆ! ಸಂಜೆಯ ಎಳೆಗಾಳಿಗೆ ಮುಂಗುರುಳು ಹೇಗೆ ಒಲೆದಾಡುತ್ತಿದೆ! ಅವಳುಟ್ಟ ನವಿಲುಬಣ್ಣದ ಸೀರೆ ಸಂಜೆಯ ಬೆಳಕಿನಲ್ಲಿ ಅದು ಹೇಗೆ ಮಿರಮಿರನೆ ಮಿಂಚಿ ಅವಳನ್ನು ಮೆರಸುತ್ತಿದೆ! ಒಂದು ಕ್ಷಣ ದಲ್ಲಿ ಮುಖ ಆಗಲೇ ಎಷ್ಟು ಕೆಂಪೇರಿದೆ! ಭೀತಿಯಿಂದಲೇ? ಭೀತಿಯಿರ ಲಾರದು; ತಾನು ಪತಿಯ ಸ್ನೇಹಿತನೆಂಬುದು ಅವಳಿಗೆ ಗೊತ್ತಿರಬಹುದು. ಲಜ್ಜೆಯಿರಬೇಕು; ಮುಖದಲ್ಲಿ ರಾಗರಸವು ತಾನೇತಾನಾಗಿ ಉಕ್ಕುತ್ತಿರ ಬೇಕು.

ಒಂದು ಕ್ಷಣಮಾತ್ರದಲ್ಲಿ ಮಾಧುವಿನ ಕಣ್ಣು ಇಷ್ಟು ನೋಟ ನೋಡಿತು; ಮನಸ್ಸು ಇಷ್ಟು ದೂರ ಹರಿಯಿತು.

ಮಾಧು ಮತ್ತೆ—'ಇಲ್ಲವೇನು. ಎಷ್ಟು ಹೊತ್ತಾಗಬಹುದೋ ಬರುವುದು' ಎಂದು ಕೇಳಿದ.

ಗೊತ್ತಿಲ್ಲವೆಂದಳು, ಇವನ ಮನಸ್ಸನ್ನರಿಯದ ಹುಡುಗಿ.

ಮಾಧುವಿಗೆ ಇನ್ನು ಹೆಚ್ಚು ನಿಲ್ಲಲು ಅವಕಾಶವಾಗಲಿಲ್ಲ. ಈ ರೀತಿಯಲ್ಲಿ ಅವನು ಎಂದೂ ವರ್ತಿಸಿದವನಲ್ಲ. ತನ್ನ ನಡತೆಯಲ್ಲಿ ತನಗೇ ಭೀತಿಯುಂಟಾಯಿತು.

ಮಾಧು ಮನೆಗೆ ಬಂದು ಊಟ ಮಾಡಿ ಬೇಗನೆ ಮಲಗಿಕೊಂಡ.

ಮಲಗಿಕೊಂಡರೆ ನಿದ್ರೆಯೇ ಬಾರದು. ಅವನ ಮನಸ್ಸಿನಲ್ಲಿ ಇದು ವರೆಗೂ ರುಕ್ಮಿಣಿಯ ರೂಪವು ತಾನೇ ತಾನಾಗಿ ಆಶ್ರಯಿಸಿಕೊಂಡಿತ್ತು; ಇಂದು ಸೂರಿಯ ಹೆಂಡತಿಯ ರೂಪವು ಸಮಾಶ್ರಯವನ್ನು ಅಲ್ಲಿ ಪಡೆಯಿತು. ಇಬ್ಬರೂ ತನ್ನ ಮನೋಮಂಟಪದಲ್ಲಿ ನಿಂತು ನಾನು ಚೆನ್ನೊ ತಾನು ಚೆನ್ನೊ ಎಂದು ಕೇಳುವಂತೆ ಇವನಿಗೆ ಭಾಸವಾಗತೊಡಗಿತು.

ಅಂತೂ ಒಂದಲ್ಲ ಒಂದು ನೆಪಮಾಡಿಕೊಂಡು ಮಾಧು ಸೂರಿಯ ಮನೆಗೆ ಹೋಗುತ್ತಿದ್ದ. ಇವನು ಹೀಗೆ ಹೋಗಿ ಬಂದು ಮಾಡುತ್ತಿದ್ದ ಒಳ ಉದ್ದೇಶವೇನೆಂದು ಸೂರಿಗೆ ಅರ್ಥವಾಗಲಿಲ್ಲ. ದಿನದಿನಕ್ಕೂ ಮಾಧುವಿನ್ಲಿಸ ಸೂರಿಗಿದ್ದ ಸ್ನೇಹ ಬಲಿಯುತ್ತ ಬಂತು; ಸಲಿಗೆ ಹೆಚ್ಚುತ್ತ ಬಂತು. ಸೂರಿಯ ಹೆಂಡತಿ ಸುಶೀಲೆಗೂ ಮಾಧುವಿನಲ್ಲಿ ಒಂದು ವಿಧವಾದ ಅಭಿಮಾನ ಹುಟ್ಟುತ್ತ ಬಂತು. ಪತಿಯ ಸೂಚನೆಯನ್ನು ತೆಗೆದು ಕೊಳ್ಳದೆಯೇ ಮಾಧುವನ್ನು ವಿಧವಿಧವಾಗಿ ಸತ್ಕರಿಸುತ್ತಿದ್ದಳು. ಹೀಗೆ ಮಾಧು ತಪ್ಪದೆ ಸೂರಿಯ ಮನೆಗೆ ಆಗಾಗ್ಗೆ ಹೋಗುತ್ತಿದ್ದ–ಸುಶೀಲೆಯನ್ನು ಒಂದು ಸಲ ಕಣ್ಣುತುಂಬ ನೋಡಿಕೊಂಡು ಬರುವ ಉದ್ದೇಶದಿಂದ.

ಬರುಬರುತ್ತ ಮಾಧು ರುಕ್ಮಿಣಿಯನ್ನು ಮರೆಯದೆ ಹೋದರೂ ಸ್ವಲ್ಪ ಉದಾಸೀನ ಮಾಡುತ್ತ ಬಂದನೆಂದು ಹೇಳಬೇಕಾಗಿದೆ. ಮೊದಮೊದಲು ಹೆಂಡತಿಗೆ ವಾರಕ್ಕೊಂದು ಸಲ ಕಾಗದ ಬರೆಯುತ್ತಿದ್ದ; ತನ್ನ ಪ್ರತಿ ಕಾಗ ದಕ್ಕೂ ತಪ್ಪದೆ ಉತ್ತರ ಬರೆಯಬೇಕೆಂದು ಅವಳಿಗೆ ಹೇಳಿದ್ದ. ಎರಡು ಸಲ ವಾರಕ್ಕೊಂದು ಕಾಗದದಂತೆ ಬರೆದ. ಆಮೇಲೆ ಒಂದು ವಾರ ಕಾಗದವೇ ಇಲ್ಲ. ಮಾಧುವಿನಿಂದ ಎರಡು ದಿವಸ ಕಾಗದ ಬಾರದಿದ್ದುದನ್ನು ನೋಡಿ ರುಕ್ಮಿಣಿ ಸುಮ್ಮನಿದ್ದಳು. ಮೂರನೆಯ ದಿವಸವೇ ತಾನು ಬರೆಯಬೇಕಾದ ಕಾಗದವನ್ನು ಬರೆದು ಹಾಕಿದಳು.

'ಪಾದಪದ್ಮಂಗಳಲ್ಲಿ ನಮಸ್ಕಾರಗಳು. ಇದು ವರೆಗೂ ತಮ್ಮ ಕಾಗದ ಬಂದಿಲ್ಲ. ನೀವು ಆರೋಗ್ಯವಾಗಿರುವಿರೋ ಇಲ್ಲವೋ ಎಂದು ನನಗೆ ಭಯ ವಾಗುತ್ತಿದೆ. ನಾನು ಬರುವಾಗ ನೀವು ಕೊಟ್ಟಿದ್ದ ಕೂದಲೆಣ್ಣೆ ಮುಗಿದು ಹೋಯಿತು. ಕೂದಲು ಬೇಕಾದಷ್ಟು ಬೆಳೆದಿದೆ. ಸದ್ಯದಲ್ಲಿಯೇ ನೀವು ಬರುವಿ ರೆಂದು ನಂಬಿರುತ್ತೇನೆ—ಇಂತಿ ನಿಮ್ಮ. . .' ಮಾಧು ಈ ಕಾಗದಕ್ಕೆ— 'ನಾನೇನು ಒಮ್ಮೆ ಬರುವುದು. ನಿನ್ನನ್ನೆ ಕರಸಬೇಕೆಂದು ಮಾಡಿಕೊಂಡಿ ದ್ದಾರೆ ಮ। ಶ್ರೀ। ಯವರು ' ಎಂದು ಮೂರು ಪಂಕ್ತಿ ಬರೆದು ಹಾಕಿದ.

ಆದರೆ ರುಕ್ಮಿಣಿಯನ್ನು ಕರಸುವ ಪ್ರಸಂಗ ಬರಲಿಲ್ಲ. ಮಾಧುವೇ ರಾಮಪುರಕ್ಕೆ ಹೋಗಬೇಕಾಯಿತು. ಇದ್ದಕಿದ್ದ ಹಾಗೆಯೇ ರುಕ್ಮಿಣಿಗೆ

ಖಾಯಿಲೆಯೆಂದು ಮಾವನವರಿಂದ ಕಾಗದ ಬಂದಿತು. ಏನು ಖಾಯಿಲೆ ಎಂದು ಬರೆದಿರಲಿಲ್ಲ.

ಮಾಧು ಬೇರೆ ಯೋಚನೆಯಿಲ್ಲದೆ ಹೆಂಡತಿಯನ್ನು ನೋಡಿಕೊಂಡು ಬರಲು ಹೋಗಬೇಕಾಯಿತು.

೩

ಮಾಧು ರಾಮಪುರವನ್ನು ಸೇರಿ, ಮಾವನ ಮನೆಯನ್ನು ಪ್ರವೇಶಿಸುವಾಗ ಮಾವನವರು ನಂಜಪ್ಪನವರು ಬಾಗಿಲಿನಲ್ಲಿಯೇ ಕುಳಿತಿದ್ದರು. ಮಾಧು ಮನೆಗೆ ಬಂದ ಸುದ್ದಿಯನ್ನು ಕೇಳಿ ಅಡಿಗೆ ಮಾಡುತ್ತಿದ್ದ ಸುಬ್ಬಮ್ಮನವರು ಅಡಿಗೆಯ ಮನೆಯಿಂದ ಹೊರಕ್ಕೆ ಬಂದರು. ನಂಜಪ್ಪನವರು ಮಾಧುವಿನ ಮನೆಯ ಕ್ಷೇಮಸಮಾಚಾರವನ್ನು ಮೊದಲು ವಿಚಾರಿಸಿ ಸುಮ್ಮನಾದರು; ಸುಬ್ಬಮ್ಮನವರು ಅಳಿಯನ ಮುಖವನ್ನು ನೋಡಿದರು ಅಷ್ಟೆ, ಅವರ ಕಣ್ಣುಗಳಲ್ಲಿ ನೀರು ಉಕ್ಕಿತು. ನಂಜಪ್ಪನವರು ಅಳಿಯನನ್ನು ರುಕ್ಮಿಣಿ ಮಲಗಿದ್ದ ಕೋಣೆಗೆ ಕರೆದುಕೊಂಡು ಹೋದರು. ಇದ್ದ ಒಂದು ಕಿಟಕಿಯ ಬಾಗಿಲು ಮುಚ್ಚಿದ್ದರಿಂದ ಕೋಣೆ ಕತ್ತಲೆ ಕವಿದಿದ್ದಿತು. ನಂಜಪ್ಪನವರು ಕಿಟಕಿಯ ಬಾಗಿಲನ್ನು ಕೊಂಚ ತೆಗೆದರು. ನುಸುಳಿ ಬಂದ ನಸುಬೆಳಕಿನಲ್ಲಿ ರುಕ್ಮಿಣಿಯ ಸ್ಥಿತಿ ಮಾಧುವಿಗೆ ವ್ಯಕ್ತವಾಯಿತು. ಅವಳ ಮುಖದ ಮೇಲೆ ಸೂಜಿಯ ಮೊನೆಯೂರುವುದಕ್ಕೆ ಎಡೆಯಿಲ್ಲದಂತೆ ಎದ್ದಿದ್ದ ಗುಳ್ಳೆಗಳನ್ನು ನೋಡಿ ರುಕ್ಮಿಣಿಗೆ ಸಿಡುಬು ಎಂದು ಗೊತ್ತಾಯಿತು. ಅವಳ ಮುಖವನ್ನು ಹೆಚ್ಚು ಹೊತ್ತು ನೋಡುವುದು ಮಾಧುವಿಗೆ ದುಸ್ಸಾಧ್ಯವಾಯಿತು. ತಾನೆ ಹೋಗಿ ಕಿಟಕಿಯ ಬಾಗಿಲು ಮುಚ್ಚಿ, ಈಚೆಗೆ ಬಂದನು.

ರಾತ್ರಿ ಮಾಧುವಿಗೆ ಸರಿಯಾಗಿ ನಿದ್ದೆ ಬರಲಿಲ್ಲ. ಆ ಸಂದರ್ಭದಲ್ಲಿ ಯಾರಿಗೆ ತಾನೆ ನಿದ್ದೆ ಬಂದೀತು ?

ಮಾಧುವಿನ ಮನಸ್ಸಿನಲ್ಲೂ ನಾನಾಬಗೆಯ ಯೋಚನೆಗಳು ಮೂಡಿ ಮುತ್ತಲಾರಂಭಿಸಿದುವು; ರುಕ್ಮಿಣಿಯ ಸ್ಥಿತಿ ಘೋರವಾಗಿರುವಂತೆ ಕಂಡಿತವನಿಗೆ; ಮನಸ್ಸಿನಲ್ಲಿಯೇ ಬಹಳವಾಗಿ ವ್ಯಥೆಪಟ್ಟನು; ಅವಳು ಉಳಿಯುವ

ಆಶೆ ಕಡವೆುಯಾಗಿ ತೋರಿತು. ಅವಳು ಸತ್ತುಹೋದರೋ—ಏನು! ರುಕ್ಮಿಣಿ ಸಾಯುವುದು, ತಾನು ಒಬ್ಬೊಂಟಿಗನಾಗಿ ಬಾಳುವುದು—ಎಂಥ ಶೋಚನೀಯಾವಸ್ಥೆ! ಅದನ್ನು ನೆನೆದು ಹೃದಯ ಝಗ್ ಎಂದಿತು. ಇಲ್ಲ; ಅವಳು ಸಾಯಲಾರಳು; ಅವಳು ಸಾಯುವುದಿಲ್ಲ. ದೇವರು ಅಷ್ಟು ಕ್ರೂರ ನಾಗಿರಲಾರನು. ತನ್ನ ಪತ್ನಿಯನ್ನು ಉಳಿಸುವನು. ಅವಳು ಉಳಿದುಕೊಳ್ಳು ವಳು. ಹೌದು, ಅವಳು ತನಗಾಗಿ ಉಳಿದುಕೊಳ್ಳುವಳು. ಅದು ಸರಿಯೆ; ತನಗೆ ಬೇಕಾದುದು ಅಷ್ಟುಮಾತ್ರ. ಅಷ್ಟುಮಾತ್ರವೇ? ಅವಳು ಉಳಿದು ಕೊಂಡು, ಅವಳ ಮುಖದ ಮೇಲೆ ಕಲೆಗಳು, ಸಿಡುಬಿನ ಗುರುತುಗಳು, ಕುರೂಪಿನ ಕುರುಹುಗಳು–ಅವೂ ಕೂಡ ಉಳಿದುಕೊಂಡರೆ? ಇಲ್ಲ, ದಯಾಳು ವಾದ ದೇವರು ಅಂಥ ಸ್ಥಿತಿಯನ್ನು ಉಂಟುಮಾಡಲಾರನು. ಆದರೆ, ಅಂಥ ಆಶೆಗೆ ಭರವಸೆಯೇನು? ದೇವನೆಂಬುವನೊಬ್ಬನಿರುವನೆ? ಇದ್ದರೂ ಅವನ ದಯೆ ತನ್ನ ಮೇಲೆ ಇದೆಯೇ? ಕಲೆ ಉಳಿದುಕೊಂಡರೆ? ರುಕ್ಮಿಣಿ ಬದುಕಿರುವ ವರೆಗೂ ಅವಳ ಸ್ವರೂಪ ಈಗ ಇರುವಂತೆ ಅಚ್ಚಳಿಯದೆ ನಿಂತರೆ?—ಥೂ, ಥೂ,—ರುಕ್ಮಿಣಿಯ ಮುಖ ಆ ಸ್ಥಿತಿಯಲ್ಲಿ ಅವನಿಗೆ ಅಸಹ್ಯವಾಗಿ ಕಂಡಿತು; ನಿದ್ದೆ ಬಾರದಿದ್ದರೂ, ಕಣ್ಣುಮುಚ್ಚಿ ಆಲೋಚಿಸುತ್ತಿದ್ದ ಮಾಧು ಮುಚ್ಚಿದ್ದ ಕಣ್ಣುಗಳನ್ನು ಕೈಯಿಂದ ಬೇರೆ ಮುಚ್ಚಿಕೊಂಡನು! ....ಇದ್ದಕ್ಕಿದ್ದಹಾಗೆ ನಕ್ಕಂತೆ ಭಾಸವಾಯಿತು. ಯಾರದು? ಯಾರು? ಸುಶೀಲೆ! ಸೂರಿಯ ಹೆಂಡತಿ ಸುಶೀಲೆ! ತನ್ನನ್ನು ಇಲ್ಲಿಗೆ ಬೆಂಬತ್ತಿಬಂದಿದ್ದಾಳೆ; ಅಥವಾ ಹಾಗೆ ಹೇಳುವುದು ತಪ್ಪಾಗಬಹುದು; ತನ್ನ ಮನಸ್ಸು ಅವಳ ಸ್ವರೂಪವನ್ನು ಮಾತ್ರ ಸೆರೆಹಿಡಿದು ತನ್ನ ಸಂಗಡ ತಂದಿದೆ. ಅಂತೂ ಈಗ ತನ್ನ ಎದುರಿಗೆ ನಿಂತಿರುವವಳು ಸುರೂಪಿ ಸುಶೀಲೆ! ಎಷ್ಟು ಚೆಲುವೆ! ಕಳಂಕರಹಿತವಾದ ಚೆಲುವು ಅವಳದು. ಆದರೆ ಇದೇನು—ಮುಖದ ಮೇಲೆ ಆಡುತ್ತಿದ್ದ ನಗೆ ಜಾರಿ ಮುನಿಸು ಮೂಡುತ್ತಿದೆ? ಹೌದು, ಮುನಿಸು. ತನ್ನನ್ನು ನಿಂದಿಸು ತ್ತಿದ್ದಾಳೆ: 'ಬೇಡಿ, ಬೇಡಿ. ಇದು ಸರಿಯಲ್ಲ. ರುಕ್ಮಿಣಿಗೆ ಅನ್ಯಾಯ ಮಾಡಬೇಡಿ, ನನಗೆ ಅಪಚಾರ ಮಾಡಬೇಡಿ. ನನ್ನ ಪತಿಗೆ ಮೋಸಮಾಡ ಬೇಡಿ. ನಿಮಗೆ ಅಪಖ್ಯಾತಿ ತಂದುಕೊಳ್ಳಬೇಡಿ. ನನ್ನ ಯಜಮಾನರು ಮನೆ ಯಲ್ಲಿಲ್ಲ. ರುಕ್ಮಿಣಿ ನಿಮಗಾಗಿ ಮನೆಯಲ್ಲಿ ಕಾಯುತ್ತಿದ್ದಾಳೆ. ಏನು,

ನಾನು ರುಕ್ಮಿಣಿಗಿಂತ ಚೆಲುವೆಯೆಂದು ನಿಮ್ಮ ಭಾವನೆಯೆ? ನನಗಿಂತಲೂ ಅವಳು ಚೆನ್ನೆಂದು ನನ್ನ ತಿಳಿವಳಿಕೆ. ಅವಳ ಮುಖದ ಮೇಲೆ ಅಲ್ಲೊಂದು ಇಲ್ಲೊಂದು ಸಿಡುಬಿನ ಕಲೆ ಉಳಿದಿರುವ ಮಾತ್ರಕ್ಕೆ ಅವಳ ಚೆಲುವು ಎಲ್ಲಿಗೆ ಹೋಯಿತು? ಕಾವ್ಯಗಳನ್ನು ಓದಿ, ಸುಪರಿಣತರಾಗಿರುವ ನಿಮಗೆ ನಾನು ಬೋಧೆಮಾಡಬೇಕೆ? ಕಲೆಯಿದ್ದರೂ ಚಂದ್ರಬಿಂಬ ಮನೋಹರವಾದು ದೆಂದು ನಾನು ಹೊಸದಾಗಿ ಹೇಳಬೇಕೆ? ಏಕೆ? ಈದುವರೆಗೂ ರುಕ್ಮಿಣಿ ಯನ್ನು ಪ್ರೀತಿಸುತ್ತಿದ್ದವರು ಈಗ ಅವಳನ್ನು ನಿರಾಕರಿಸುವುದಕ್ಕೆ ಕಾರಣ ವೇನು? ಅವಳ ಸಿಡುಬಿನ ಕಲೆಗಳೆ? ಎಂಥ ಅಲ್ಪಕಾರಣ! ಪ್ರೇಮವು ಎಲ್ಲ ವನ್ನೂ ಮೀರಿದ್ದೆಂಬುದು ನಿಮಗೆ ತಿಳಿಯದೆ? ಜಾತಿ, ಮತ, ಕುಲ— ಯಾವುದೂ ಪ್ರೇಮದ ಪ್ರಭುತ್ವಕ್ಕೆ ಅಡ್ಡಿ ತರಲಾರದಲ್ಲವೆ? ರೂಪು ತಾನೆ ಪ್ರೇಮಕ್ಕೆ ಹೇಗೆ ಅಡ್ಡಿ ತಂದೀತು? ಪ್ರೇಮಜ್ವಾಲೆ ಉರಿಯುವುದಕ್ಕೆ ರೂಪು ಕೆಲವು ವೇಳೆ ನಿಮಿತ್ತಮಾತ್ರವಾಗಿರಬಹುದು. ಆದರೆ ಸ್ವಾರ್ಥರಹಿತ ವಾದ ಶುದ್ಧಪ್ರೇಮ ಯಾವ ನಿಮಿತ್ತವನ್ನೂ ಅಪೇಕ್ಷಿಸದೆ ಕಂಗೊಳಿಸುವ ಸ್ವಯಂಪ್ರಕಾಶಮಾನ ವಸ್ತು. ನಿಮ್ಮ ವರ್ತನೆಯನ್ನು ನೋಡಿದರೆ ಪ್ರೇಮದ ಸ್ವರೂಪವನ್ನು ನೀವು ಅರಿತಿರಲಾರಿರೆಂದು ತೋರುತ್ತದೆ. ಖಂಡಿತವಾಗಿ ಹೇಳಿ—ರುಕ್ಮಿಣಿಯನ್ನು ನೀವು ಪ್ರೀತಿಸುತ್ತಿದ್ದಿರಾ?'

'ಪ್ರೀ–ತಿ–ಸು–ತ್ತಿ–ದ್ದೆ —ಪ್ರೀ......' ಎಂದು ಮಾಧು ಅರೆ ನಿದ್ದೆಯಲ್ಲಿ ಗೊಣಗುಟ್ಟಿದನು.

ಸ್ವಪ್ನ-ಸುಶೀಲೆಯ ಸುಬೋಧವಾಣಿ ಮುಂದುವರಿಯಿತು: 'ಪ್ರೀತಿ ಸುತ್ತಿದ್ದಿರಾ? ಇಲ್ಲ. ನೀವು ಅವಳನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿರ ಲಿಲ್ಲ. ಅವಳ ಸಿರಿಮೊಗಕ್ಕೆ, ಅವಳ ನಲ್ನಿಲುವಿಗೆ, ಅವಳ ನೋಟದ ಗೆಲುವಿಗೆ ನೀವು ಮನಸೋತು ಅವಳನ್ನು ಪ್ರೀತಿಸುತ್ತೇನೆ ಎಂದುಕೊಳ್ಳುತ್ತಿದ್ದಿರಿ— ಅಷ್ಟೆ. ಅವಳಲ್ಲಿ ನಿಮಗಿದ್ದುದು—ಮೋಹ, ಕಾಮ, ಅಷ್ಟೆ. ಅದು ಪ್ರೀತಿ ಯಲ್ಲ. ಆದರೆ ರುಕ್ಮಿಣಿಯ ಪ್ರೇಮ ನಿಸ್ವಾರ್ಥವಾದುದು, ನಿಜವಾದುದು. ನೀವು ಅಷ್ಟೇನೂ ಸ್ಫುರದ್ರೂಪಿಗಳಲ್ಲವೆಂದರೆ ಕೋಪಗೊಳ್ಳಬೇಡಿ; ನನ್ನ ಯಜಮಾನರಷ್ಟು ನೀವು ಲಕ್ಷಣವಂತರಲ್ಲವೆಂದರೆ ಮುನಿಯಬೇಡಿ. ಆದರೂ ನಿಮ್ಮನ್ನು ರುಕ್ಮಿಣಿ ಅಂತಃಕರಣಪೂರ್ವಕವಾಗಿ ಪ್ರೀತಿಸುತ್ತಾಳೆ. ನೀವು

ಅಷ್ಟು ರೂಪಂವತರಲ್ಲವೆಂಬುದು ನಿಮಗೇ ಗೊತ್ತಿದ್ದುದರಿಂದ, ರುಕ್ಮಿಣಿ ನಿಮ್ಮನ್ನು ಪ್ರೀತಿಸುವಳೋ ಇಲ್ಲವೋ ಎಂದು ಶಂಕಿಸಿ, ನೀವು ಪದೇ ಪದೇ- 'ನೀನು ನನ್ನ ಪ್ರೀತಿಸುವುದಿಲ್ಲವೇ?' ಎಂದು ಅವಳನ್ನು ಕೇಳಿ ಕೇಳಿ ಪೀಡಿಸುತ್ತಿದ್ದಿರಿ. ನೀವು ರುಕ್ಮಿಣಿಯನ್ನು ನ್ಯಾಯವಾಗಿ ಪ್ರೀತಿಸುತ್ತಿರಲಿಲ್ಲ. ಅದಕ್ಕೇ ನನ್ನನ್ನು ಕಂಡು ಈಗ ನನ್ನಲ್ಲಿ ಮೋಹಗೊಂಡಿರುವಿರಿ. ನಾಳೆ ಇನ್ನೊಬ್ಬಳು ನಿಮ್ಮ ಕಣ್ಣಿಗೆ ಹೆಚ್ಚು ಸುಂದರಳಾಗಿ ಕಾಣಬಹುದು. ಹೊರಗಣ್ಣಿಗೆ ಕಾಣುವ ಸೌಂದರ್ಯದ ಬಣ್ಣ ಬದಲಾಗುತ್ತ ಹೋಗುತ್ತದೆ; ಸೌಂದರ್ಯಪಿಪಾಸೆಗೆ ಪಾರವಿಲ್ಲದಂತಾಗುತ್ತದೆ. ಹೊರಗಣ್ಣನ್ನು ಹೆಚ್ಚು ತೆರೆದರೆ ಒಳಗಣ್ಣು—ಹೃದಯದ ಕಣ್ಣು—ಅದು ಮುಚ್ಚುತ್ತದೆ; ಹೊರಗಣ್ಣನ್ನು ಮುಚ್ಚಿ ಒಳಗಣ್ಣನ್ನು ತೆರೆದರೆ ಆ ದೃಷ್ಟಿಗೆ ಎಲ್ಲವೂ ಸುಂದರ. ಪ್ರೇಮ ಸ್ಪರ್ಶಿಸಿದೆಡೆಯಲ್ಲಿ ಇಲ್ಲದ ಸುಖ-ಸೌಂದರ್ಯಗಳು ಒಟ್ಟಿಗೆ ಚಿಮ್ಮುವುವು; ಪ್ರೇಮವಿಲ್ಲದೆಡೆಯಲ್ಲಿ ಇರುವ ಸುಖ-ಸೌಂದರ್ಯಗಳೂ ಇಂಗುವುವು. ನನಗೆ ಉತ್ತರ ಕೊಡಿ ಈಗ: ನೀವು ಆಣೆಯಿಟ್ಟು ಹೇಳಿ—ರುಕ್ಮಿಣಿಯನ್ನು ನಿಜವಾಗಿ ಪ್ರೀತಿಸುತ್ತಿದ್ದಿರಾ?'

'ಇಲ್ಲಾ, ಇಲ್ಲಾ; ಸುಶೀಲೆ. ನಿನ್ನನ್ನು ಪತ್ನಿಯಾಗಿ ಪಡೆದ ಸೂರಿಯ ಪುಣ್ಯವೇ ಪುಣ್ಯ. ನಿನ್ನ ಕಡೆಗೆ ನನ್ನ ಕಾಮದೃಷ್ಟಿ ಬಿದ್ದುದಕ್ಕಾಗಿ ದೇವರು ನನಗೆ ತಕ್ಕ ಶಿಕ್ಷೆ ಕೊಟ್ಟಿದ್ದಾನೆ. ನನ್ನನ್ನು ಕ್ಷಮಿಸು. ರುಕ್ಮಿಣಿಯನ್ನು ಇನ್ನುಮೇಲಾದರೂ ನಾನು ಹೃದಯಪೂರ್ವಕವಾಗಿ ಪ್ರೀತಿಸುತ್ತೇನೆ. ದೇವರು ಅವಳನ್ನು ನನಗೆ ಉಳಿಸಿಕೊಡುವನೆ? ಅವಳು ಉಳಿಯಲಿ—ಅವಳ ಮುಖದ ಮೇಲೆ ಸಾವಿರಾರು ಸಿಡುಬಿನ ಕಲೆಗಳುಳಿಯಲಿ—ನಾನು ಅವಳನ್ನು ಪ್ರೀತಿಸುತ್ತೇನೆ, ಖಂಡಿತವಾಗಿಯೂ ಪ್ರೀತಿಸುತ್ತೇನೆ, ಪ್ರೀತಿಸುತ್ತೇನೆ, ಪ್ರೀತಿಸುತ್ತೇನೆ. ನೀನು ನನ್ನ ಸಹೋದರಿ ಸುಶೀಲೆ; ರುಕ್ಮಿಣಿ ಪ್ರೇಮದ ಪತ್ನಿ. ಆದರೆ ಅವಳು ಉಳಿಯುವಳೇ, ಅಯ್ಯೋ ದೇವರೇ!'

ಇಷ್ಟುಹೊತ್ತಿಗೆ ಮೊದಲೇ ಆಲೋಚನೆಗಳಲ್ಲಿ ಸಿಲುಕಿದ್ದ ಮಾಧುವಿನ ಮನಸ್ಸು ಬಳಲಿ ಅವನಿಗೆ ನಿದ್ರೆ ಹತ್ತಲು ಮೊದಲಾಗಿತ್ತು; ಆಲೋಚನಾ ಚಿತ್ರಗಳು ಸ್ವಪ್ನರೂಪವನ್ನು ತಾಳಿದ್ದುವು. ಮಾಧು ಕನಸು ಕಾಣುತ್ತಿದ್ದನು.

ಸ್ವಪ್ನ-ಸೋದರಿ ಸುಶೀಲೆ ಮುಂದುವರಿಸಿದಳು: 'ಹೆದರಬೇಡ ಅಣ್ಣಾ.

ಸಾವಿತ್ರಿ ಸತ್ಯವಾನರ ಸಂಗತಿ ನಿನಗೆ ಗೊತ್ತಿಲ್ಲವೆ? ಪ್ರೇಮವಿಜಯ-ರಿಪುವಿನ ಸೋಲು! ನಿನ್ನ ಪ್ರೇಮ ನಿನ್ನ ರುಕ್ಮಿಣಿಯ ಪ್ರೇಮಕ್ಕೆ ಸಮನಾಗಿ ಕಾವುಗೊಂಡು ಉರಿಯುತೊಡಗಿದರೆ—ರೋಗ, ರುಜೆ ಎಲ್ಲ ಓಡುವುವು; ಮೃತ್ಯು ಸಹ ಹಿಂಜರಿಯುವುದು' ಎಂದು ಹೇಳಿ ಸುಶೀಲೆ ಮಾಯವಾದಳು. ಮಾಧು ಗಾಢನಿದ್ದೆಯಲ್ಲಿ ಮುಳುಗಿದನು.

* * * * *

ರುಕ್ಮಿಣಿಯ ಸ್ಥಿತಿ ಉತ್ತಮಗೊಳ್ಳುತ್ತ ಬಂದಿತ್ತು. ಸಿಡುಬಿನ ಗುಳ್ಳೆಗಳು ಒಡೆದು ಇಂಗುತ್ತಿದ್ದುವು. ನಂಜಪ್ಪ ಸುಬ್ಬಮ್ಮನವರ ಆನಂದಕ್ಕೆ ಪಾರವೇ ಇಲ್ಲ. ಮಾಧು ಸಹ ಪರಮಾನಂದಪಟ್ಟನೆಂದು ಬೇರೆ ಹೇಳಲೇಬೇಕಾಗಿಲ್ಲ.

ಸುಬ್ಬಮ್ಮನವರೇನೋ ರುಕ್ಮಿಣಿಯ ಮುಖದಲ್ಲಿ—ಕಡೆಯ ಪಕ್ಷ ಹತ್ತುಹನ್ನೆರಡಾದರೂ ಸಿಡುಬಿನ ಕಲೆಗಳು ಉಳಿದೇ ಉಳಿಯುತ್ತವೆಂದು ನಿಶ್ಚಯಿಸಿಕೊಂಡುಬಿಟ್ಟಿದ್ದರು. ಮಾಧುವೂ ಪಾಪ ಅನುಭವಸ್ಥರೆಂದು ಅವರ ಮಾತನ್ನು ನಂಬಿದ್ದ. ಎಷ್ಟೋ ಗಟ್ಟಿಮನಸ್ಸು ಮಾಡಿಕೊಂಡರೂ, ಎಷ್ಟು ಕುರೂಪಿಯಾಗಿ ಪರಿಣಮಿಸಿದರೂ ರುಕ್ಮಿಣಿಯನ್ನು ತಾನು ಅಂತಃಕರಣಪೂರ್ವಕವಾಗಿ ಪ್ರೀತಿಸುವೆನೆಂದು ಹೃದಯವನ್ನು ಎಷ್ಟೋ ವಿಶಾಲವಾಗಿ ತೆರೆದುಕೊಂಡರೂ,— ರುಕ್ಮಿಣಿ ಮೊದಲಿನಂತೆಯೇ ಇದ್ದರೆ ಚೆನ್ನಾಗಿರುವುದಲ್ಲವೆ—ದೇವಾ, ಅವಳನ್ನು ವಿಕಾರಗೊಳಿಸಬೇಡ' ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದ.

ರುಕ್ಮಿಣಿ ಖಾಯಿಲೆ ಬಿದ್ದು ಒಂದು ತಿಂಗಳ ಮೇಲಾಗಿತ್ತು. ಸಿಡುಬಿನ ಗುಳ್ಳೆಗಳೆಲ್ಲ ಸಂಪೂರ್ಣವಾಗಿ ಒಡೆದು ಮಾದಿದ್ದುವು. ಅವಳ ಮುಖದ ಮೇಲೆ ಬೇಕಾದಷ್ಟು ಗುಳ್ಳೆಯ ಗುರುತುಗಳು ಹಸಿಯಾಗಿ ಉಳಿದುಕೊಂಡಿದ್ದುವು.

ಮಾಧು ಹೆಚ್ಚು ರಜಕ್ಕೆ ಬರೆದುಹಾಕಿ, ತನ್ನ ಊರಿಗೆ ಹಿಂದಿರುಗದೆ, ರುಕ್ಮಿಣಿಯ ಸಮೀಪದಲ್ಲಿಯೇ ಉಳಿದುಕೊಂಡಿದ್ದನು. ಇದರಿಂದ ರುಕ್ಮಿಣಿಗೆ ಎಷ್ಟೋ ಮೇಲಾಗಿತ್ತು.

ಒಂದು ದಿವಸ ಮಧ್ಯಾಹ್ನ—ರುಕ್ಮಿಣಿಗೆ ಮುಕ್ಕಾಲು ಪಾಲು ಗುಣವಾಗಿದ್ದಾಗ—ಮಾಧು ಅವಳ ಪಕ್ಕದಲ್ಲಿ ಕುಳಿತು ಅವಳಿಗೆ ಕಿತ್ತಿಳೆ ತೊಳೆಯ ಕುಸುಮಗಳನ್ನು ಬಿಡಿಸಿ ಕೊಡುತ್ತಿದ್ದನು. ರುಕ್ಮಿಣಿ ಹಣ್ಣು ತಿಂದು ಬಹಳ

ಸಂತುಷ್ಟಿಗೊಂಡಳು; ಅವಳ ಕಣ್ಣುಗಳಲ್ಲಿ ಏನೋ ಒಂದು ಆಶೆಯ, ಭರವಸೆಯ ಕುರುಹು ಮೂಡಿತು. ಆದರೆ ಕೂಡಲೆ ಮಾಯವಾಯಿತು. ದೈನ್ಯವು ತಾನೇ ತಾನಾಗಿ ಕಣ್ಣೀರು ಧಾರೆಯಾಗಿ ಅವಳ ಕಣ್ಣಿನಿಂದ ಹರಿಯತೊಡಗಿತು.

ಮಾಧು ಅವಳ ಕಣ್ಣೀರೊರಸಿ, ತಲೆಕೂದಲನ್ನು ನೇವರಿಸಿ, ಪ್ರೇಮಾದರದಿಂದ ಸಂತೈಸತೊಡಗಿದನು. ದುಗುಡಕ್ಕೆ ಕಾರಣ ಕೇಳಿದನು.

ರುಕ್ಮಿಣಿ ಕುಗ್ಗಿದ ದನಿಯಲ್ಲಿ, ಬಿಕ್ಕಿ ಬಿಕ್ಕಿ ಮಾತನಾಡಿದಳು: 'ಈಗೇನೋ—ನನಗೆ ಖಾಯಿಲೆ; ಅಯ್ಯೋ ಪಾಪ ಎಂದು ಮರುಗುತ್ತೀರಿ. ನಾನು ಸಂಪೂರ್ಣವಾಗಿ ಗುಣ ಹೊಂದಿ—ನನ್ನ ಮುಖದ ಮೇಲೆ ಕಲೆಗಳು ಉಳಿದಾಗ..ಹಿಂದೆ ನನ್ನ ಗಲ್ಲದ ಮೇಲೆ ಒಂದು ಕಲೆ ಇದ್ದದ್ದಕ್ಕೇ ಮನಸ್ಸೊಂದುಕೊಳ್ಳುತ್ತಿದ್ದಿರಿ....ಇನ್ನುಮುಂದೆ....' ಎಂದು ಬಿಕ್ಕಿ, ಅಳತೊಡಗಿದಳು. ತಾನು ಏನು ಬೇಕಾದರೂ ಮಾಡುವೆನೆಂದು ಮಾಧು ಭರವಸೆ ಕೊಟ್ಟು ಸಮಾಧಾನ ಮಾಡಿದ ಮೇಲೆ, ಮಾಧು ತನಗೆ ಹಿಂದೊಮ್ಮೆ ಹಾಕುತ್ತಿದ್ದ ಪ್ರಶ್ನೆಯನ್ನು ಈಗ ರುಕ್ಮಿಣಿ ಅವನಿಗೆ ಹಾಕಿದಳು.

'ಇನ್ನುಮುಂದೂ—ನನ್ನನ್ನು—ಹಿಂದಿನಂತೆ—ಪ್ರೀತಿಸುವಿರಾ?'

'ರುಕ್ಮಿಣಿ-ರುಕ್ಮಿಣಿ ಎಂದೆಂದೂ ನಾನು ನಿನ್ನನ್ನು ಪ್ರೀತಿಸುತ್ತೇನೆ. ನಿನ್ನ ಮುಖದ ಮೇಲೆ ನೂರು ಕಲೆಗಳು ನಿಂತರೂ ನಾನು ನಿನ್ನನ್ನು ಪ್ರೀತಿಸುತ್ತೇನೆ.'

* * * * * *

ಆದರೆ, ಸಂಪೂರ್ಣ ಗುಣವಾದ ಮೇಲೆ, ರುಕ್ಮಿಣಿಯ ಮುಖದ ಮೇಲೆ ಒಂದು ಸಿಡುಬಿನ ಕಲೆ ಕೂಡ ಉಳಿಯಲಿಲ್ಲ.

ಒಂದು ದಿನ ರುಕ್ಮಿಣಿ ಮಾಧುವನ್ನು ಕುರಿತು ಹೀಗೆ ಹಾಸ್ಯ ಮಾಡಿದಳು: 'ಒಂದು ವೇಳೆ ನನ್ನ ಮುಖದಲ್ಲಿ ಸಿಡುಬಿನ ಕಲೆ ಉಳಿದಿದ್ದರೆ ಎಷ್ಟು 'ಸ್ನೋ' ಶೀಸೆಗಳನ್ನು ತಂದುಕೊಡುತ್ತಿದ್ದಿರಿ?'

'ಒಂದನ್ನೂ ತಂದುಕೊಡುತ್ತಿರಲಿಲ್ಲ. ಬೇರೆ ಮದುವೆ ಮಾಡಿಕೊಳ್ಳುತ್ತಿದ್ದೆ, ಗೊತ್ತೊ?' ಎಂದು ತುದಿಬೆಟ್ಟಿನಿಂದ ರುಕ್ಮಿಣಿಯ ಗಲ್ಲ ಹಿಡಿದು ಅಲುಗಿಸಿದ.

———

# ಕಳ್ಳ ರಂಗ

ನನ್ನ ಕೊಠಡಿಯಲ್ಲಿ ಏನನ್ನೋ ಬರೆಯುತ್ತ ಕುಳಿತಿದ್ದೆ. ಪಕ್ಕದ ಮನೆಯ ಅಂಗಳದಲ್ಲಿ ಗಲಾಟೆಯಾಗುತ್ತಿತ್ತು; ಆ ಮನೆಯ ಕಡೆಗಿದ್ದ ನನ್ನ ಕೋಣೆಯ ಕಿಟಕಿಯ ಬಾಗಿಲನ್ನು ತೆರೆದು ಗಲಾಟೆಯೇನೆಂದು ಆಲಿಸುತ್ತ ಕುಳಿತೆ. ಮನೆಯ ಅಂಗಳದಲ್ಲಿ ನಡೆಯುವುದೂ ನನಗೆ ಕಾಣುವಂತಿತ್ತು.

ಮನೆಯ ಯಜಮಾನರು—ಐಶ್ವರ್ಯವಂತರು—ಯಾರನ್ನೋ ಗದರಿಸಿ ಕೊಳ್ಳುತಿದ್ದರು:

' ಸುವರ್! ಕತ್ತೆ, ರ್ಯಾಸ್ಕಕಲ್! ಹೋಗ್ತಿಯೋ ಇಲ್ಲವೋ ಆಚೆಗೆ. '

ಅಂಗಳದೊಳಗೆ ನಿಂತಿದ್ದವನು ಕದಲಲಿಲ್ಲ.

' ಹೊರಡುತ್ತೀಯೋ ಇಲ್ಲವೋ ಆಚೆಗೆ? ಕಡಿದರೆ ನಾಲ್ಕಾಳಾಗುವ ಹಾಗಿದ್ದೀ. ಕೂಲಿ ಮಾಡು ಎಲ್ಲಾದರೂ ಹೋಗಿ. ಭಿಕ್ಷವಂತೆ ಇವನಿಗೆ ಭಿಕ್ಷ. '

ನಿಂತಿದ್ದವನು ನಿಂತಲ್ಲಿಯೇ ಧೈರ್ಯದಿಂದ, ಆದರೂ ವಿನಯದಿಂದ, ಹೇಳಿದ:

' ಕೂಲಿ ಗೀಲಿ ಎಲ್ಲಾ ನಮ್ಮಪ್ಪನ್ ಕಾಲ್ಕೇನೆ ಆಗೋಯ್ತು ಸಾಮಿ. ಕೂಲೀನೆ ಸಿಕಾಕಿಲ್ಲ ಈಗ. ಅತ್ವಾ ಒಂದ್ವೇಳೆ ಸಿಕ್ಕಿದ್ರೂನೂ ನನ್ನೊಬ್ನೊಟ್ಟೆ ಒರ್ಯೋಕಿಲ್ಲ. ಇದ್ಯಾಕ್ ಇಂಗಾಯ್ತು ಅಂತ ಅರ್ತ್ವಾನೆ ಆಗೋಕಿಲ್ಲ. ಏನಾರೋ ಎಾಗಾರೋ ಎಲ್ಲಾರೋ ಗೆಯ್ಯೋವ ಅಂತ ಸುತ್ತೀ ಸುತ್ತೀ

ಸುತ್ತಿದ್ರೂನು ಏನಾರೋ ಸಿಕ್ಕಿದ್ರುಲ್ಲಾ ಗೆಯ್ಯೋದು. ಹಾಳೀ ಪಾಪಿ ಹೊಟ್ಟೆ ತುಂಬಿಸ್ಬೇಕು. ಮನೇಲಿ ಮುದುಕವ್ವ ಒಬ್ಳು, ಯೆಡ್ತಿ ಒಬ್ಳು. ನಿಮ್ಮನೇಲೇ ಕೂಲಿ ಏನಾದ್ರೂ ಇದ್ರೆ ಕೊಡಿ ಸಾಮಿ, ಮಾಡ್ತೀನಿ.'

ಮನೆಯಾತ ಒಳಬಾಗಿಲಿನಲ್ಲಿ ನಿಂತಿದ್ದವರು ಹೊರಕ್ಕೆ ಬಂದು ಇಮ್ಮಡಿ ಬಿರುಸಿನಿಂದ ಗದರುವುದಕ್ಕೆ ಮೊದಲುಮಾಡಿದರು :

'ನಿನಗೆ ಕೂಲಿ ಕೊಡುವುದಕ್ಕೆ ನಾನು ಕಾರ್ಖಾನೆ ಇಟ್ಟಿಲ್ಲ ಇಲ್ಲಿ.'

'ನೀವ್ ಮಡ್ಗಿಲ್ಲ ಸಾಮಿ, ನನ್ಗೂ ಕಾಣುತ್ತದೆ. ಕೂಲಿ ಸಿಕ್ಕೋತಾವ್ಕೆ ಒಂದು ಕಾಜ್ಗ ಕೊಡಿ ಸಾಮಿ.'

'ತಲೆಹರಟೆ ಆಡಬೇಡ. ಹೊರಡು ಆಚೆಗೆ.'

'ಗರೀಬನ್ ಮ್ಯಾಲೆ ಕೋಪ ಮಾಡ್ಬಾರ್ದು ಬುದ್ಧಿ. ಅರಮನೆ ಅಂತ ಬಂಗ್ಲೆ ಕಟ್ಕೊಂಡಿದ್ದೀರಿ. ನಮ್ಮವ್ವ—ಮುದ್ಕಿ, ನನ್ನೆಡ್ತಿ ಮಗ (ಮಗು) ಉಪಾಸ ನಿನ್ನೆ ಇಂದ. ಏನಾದ್ರೂ ಕೊಡಿ ಅಂದ್ರೆ, ಕೂಲಿ ಮಾಡು ಅಂತೀರ. ಕೂಲಿ ಕೊಡ್ಸಿ ಅಂದ್ರೆ ರೇಗ್ತೀರ.'

'ಬಾಯಿ ಮುಚ್ಚು ಬೇಕೂಫ್! ಕೂಲಿಯಂತೆ ಕೂಲಿ ಈ ಮೈಗಳ್ಳನಿಗೆ. ಎಲ್ಲಾದರೂ ಹೋಗಿ ಕಳ್ಳತನ ಮಾಡು.'

'ದೇವ್ರುನ್ನೂ ಆ ಬುದ್ಧಿ ಕೊಟ್ಟಿಲ್ಲ ಸಾಮಿ. ಕೊಟ್ ಮ್ಯಾಕೆ ನಿಮ್ಮನೇಗೆ ಮೊದ್ಲು ಬೀಳ್ತಿನಿ.'

ಮನೆಯ ಯಜಮಾನರು (ಅವರ ಹೆಸರು ಯಾವುದಾದರೇನು) ಕೋಪವನ್ನು ತಡೆಯಲಾರದೆ ನಿಂತಿದ್ದವನ ಕೆನ್ನೆಗೆ ಬಲವಾಗಿ ಒಂದು ಏಟು ಕೊಟ್ಟರು. ಭಿಕ್ಷಕ್ಕೆ ಬಂದಿದ್ದವನಿಗೂ ಬಹಳ ಕೆಣಕಿದಂತಾಗಿರಬೇಕು, ಅವನು ಮನೆಯ ಯಜಮಾನರ ಎರಡು ರಟ್ಟೆಗಳನ್ನೂ ಬಲವಾಗಿ ಹಿಡಿದುಕೊಂಡ.

ಏನೋ ವಿಪರೀತಕ್ಕೆ ಇಟ್ಟುಕೊಂಡಿತೆಂದು ನಾನು ಅಲ್ಲಿಗೆ ಓಡಿ ಹೋದೆ. ಭಿಕ್ಷಕ್ಕೆ ಬಂದಿದ್ದವನನ್ನು ಒಂದು ಕಡೆ ತಳ್ಳಿ, 'ಬಾರೋ ಇಲ್ಲಿ' ಭಿಕ್ಷೆ ಕೊಡುತ್ತೀನಿ' ಎಂದೆ. ಅಷ್ಟು ಹೊತ್ತಿಗೆ ಬೀದಿಯಲ್ಲಿ ಹೋಗುತಿದ್ದವರು ಯಾರು ಯಾರೋ ಗುಂಪು ಕೂಡಿ ಬಂದು ಅವನನ್ನು ನೀರು ಕೇಳುವಂತೆ ಹೊಡೆಯುವುದಕ್ಕೆ ಮೊದಲು ಮಾಡಿದರು. 'ಆದದ್ದು ಆಗಿ ಹೋಯ್ತು. ಅಷ್ಟೊಂದು ಹೊಡೆಯಬೇಡಿ, ಪಾಪ' ಎಂದು ಎಷ್ಟು ಹೇಳಿ

ದರೂ ಕೇಳದೆ,—' ಇಂಥ ದೊಡ್ಡ ಮನುಷ್ಯರ ಮೇಲೆ ಕೈಮಾಡೋಣ ಎಂದರೇನು ? ಇವನನ್ನು ಪೋಲಿಸಿಗೆ ಕೊಡಬೇಕು. ಇವನು ಭಿಕ್ಷದ ಸೋಗು ಹಾಕಿಕೊಂಡು ಕಳ್ಳತನಕ್ಕೆ ಬಂದಿದ್ದಾನೆ.· ಖೂನಿ ಮಾಡಲೂ ಹೇಸುವು ದಿಲ್ಲ ' ಎಂದು ಭಿಕ್ಷಕ್ಕೆ ಬಂದವನನ್ನು ದರದರನೆ ಎಳೆದುಕೊಂಡು ಹೋದರು. ನಾನು ನನ್ನ ಕೋಣೆಗೆ ಹಿಂತಿರುಗಿದೆ.

ಅಂದು ಆ ಜನರು ಆ ಬಡಪ್ರಾಣಿಯನ್ನು ಪೋಲಿಸ್ ಠಾಣೆಗೇ ಎಳೆದುಕೊಂಡು ಹೋಗಿರಬೇಕು ಎಂದುಕೊಂಡೆ. ನ್ಯಾಯಾನ್ಯಾಯಗಳನ್ನು ದೇವರೇ ವಿಚಾರಿಸಿಕೊಳ್ಳುತ್ತಾನೆ ಎಂದು ಸಮಾಧಾನ ತಂದುಕೊಂಡು, ಮತ್ತೆ ಬರೆಯಲು ಪ್ರಾರಂಭಮಾಡಿದೆ.

* * * * *

ನನ್ನ ಊಹೆ ತಪ್ಪಾಗಿರಲಿಲ್ಲ. ಆ ಮನುಷ್ಯನನ್ನು ಪೋಲೀಸು ಠಾಣೆಗೆ ಕರೆದುಕೊಂಡು ಹೋಗಿದ್ದರು. ಇದನ್ನು ಆ ನಿರ್ಭಾಗ್ಯನೇ ನನಗೆ ಹೇಳಿದ. ಅವನ ಹೆಸರು ರಂಗ ಎಂದು ತಿಳಿದದ್ದೂ ಆಗಲೇ.

ಹಿಂದೆ ಹೇಳಿದ ಸಂಗತಿ ನಡೆದ ಒಂದೆರಡು ವರ್ಷಗಳ ಮೇಲೆ, ಒಂದು ದಿವಸ ಮನೆಯೊಳಕ್ಕೆ ಬರುತಿದ್ದೆ. ( ಈಗ ಮನೆ ಬದಲಾಯಿಸಿದ್ದೆ; ಹಿಂದಿನ ಮನೆಯಲ್ಲಿರಲಿಲ್ಲ. ) ಯಾರೋ ' ಬುದ್ದೀ ' ಎಂದ ಹಾಗೆ ಕೇಳಿತು. ಹಿಂದೆ ತಿರುಗಿ ನೋಡಿ, ಒಳಕ್ಕೆ ಹೋಗದೆ ಹಾಗೆಯೇ ನಿಂತೆ.

ಒಬ್ಬ ಕುಂಟ ಬಂದು ನಿಂತ :

' ಬುದ್ದೀ ' ಎಂದ ಸಲಿಗೆಯಿಂದ.

ಅವನ ಧ್ವನಿಯನ್ನು ಹಿಂದೆ ಎಲ್ಲೋ ಕೇಳಿದ್ದಂತೆ ನೆನಪಾಯಿತು. ಎಲ್ಲಿ ? ಇವನು ಯಾರು ? ಎನ್ನುವುದು ನೆನಪಿಗೆ ಬರಲಿಲ್ಲ. ಮುಖ ಗುರುತು ಹತ್ತ ಲಿಲ್ಲ. ಸ್ವಲ್ಪ ಹೊತ್ತು ಹಾಗೆಯೇ ನಿಂತಿದ್ದೆ.

' ನೆಪ್ಪಿಲ್ವಾ ಬುದ್ಧಿ ? ನಾನು ರಂಗ—ಕಳ್ ರಂಗ, ' ಎಂದು ಒಂದು ಒಗೆಯ ಅಭಿಮಾನದಿಂದ ಹೇಳಿದ.

ಆದರೂ ನನಗೆ ಸ್ಪಷ್ಟವಾಗಿ ನೆನಪಿಗೆ ಬರಲಿಲ್ಲ.

' ನಾನು —ನಿಮ್ಗೆ ನೆಪ್ಪಿಲ್ಲ ಅಂತ ಕಾಣ್ತದೆ. ನನ್ಹೆಸರು ರಂಗ ಬುದ್ಧಿ. ನಮ್ಮ ಹಳ್ಳೀಲಿ ನನ್ನ ರುಸ್ತುಂ ರಂಗ ಅಂತಿದ್ರು. ಈ ಊರಿನಾಗೆ ಪೇಟೇಗೆ

ವಾಪ್ರೆ ಕಳ್ರಂಗ ಅಂತ ಬಿಕ್ಸ ಕೊಡೋಕಿಲ್ಲ. ಏನೋ ಬ್ರಾಂಬರ ಕೇರೀಗೆ ಬಂದ್ರೆ ಮೂರು ಕಾಳಾದ್ರು ಹುಟ್ತದೆ ಇನ್ನ. ಎಲ್ಲಾ ಬ್ರಾಂಬ್ರೂ ಆ ಯುವ್ ದರ್ಮನಷ್ಟು ಕೆಟ್ಟಿಲ್ಲ ಬುದ್ದಿ. ಈಗ ಮನೆ ಬದಲಾಯಿಸ್ ಬುಟ್ಟಿದೀರ ಅಲ್ವಾ ಸನ್ನೊಡ್ಯಾ?'

ಇನ್ನೂ ಇವನು ಯಾರೆಂದು ನನಗೆ ಗೊತ್ತಾಗಲಿಲ್ಲ. ಆದರೂ ಪರಿಚಿತ ವ್ಯಕ್ತಿ ಎಂದು ಮನಸ್ಸಿಗೆ ಬೋಧೆಯಾಗುತಿತ್ತು. 'ನೀನು ಯಾರು?' ಎಂದು ಕೇಳಿದೆ. ಈ ಮೊದಲೇ ಹೇಳಿರುವ ಸಂಗತಿಯನ್ನು ಅವನು ನನ್ನ ನೆನಪಿಗೆ ತಂದುಕೊಟ್ಟ ಬಳಿಕ ಈ ರಂಗ ಯಾರು ಎನ್ನುವುದು ಗೊತ್ತಾಯಿತು. ಅವನ ವಿಷಯದಲ್ಲಿ ತೀವ್ರ ಕುತೂಹಲವುಂಟಾಯಿತು. ಅವನು ಮರೆಮಾಚದೆ ಹೇಳಿದ್ದೆಲ್ಲವನ್ನೂ ಸಾವಧಾನದಿಂದ ಕೇಳಿದೆ:

'ನಾನು ವುಟ್ಟಿದ್ದು ರೈತನೊಟ್ಟೇಲಿ ಬುದ್ದಿ. ನಮ್ಮಪ್ಪ ಮನೆ ಹೊಲ ತೋಟ ಎಲ್ಲ ಸೂಳೇಗೆ ತೆತ್ ಬಿಟ್ಟ. ನಾನು ನಮ್ಮವ್ವ ನನ್ನ ಯೆಡ್ತಿ ನನ್ನ ಮಗ ಇವರ್ನ ಕರಕೊಂಡಿ ಏನೋ ದೊಡ್ಡೂರೂ, ಎಲ್ಲಾದ್ರೂ ಕೆಲ್ಸ ಸಿಕ್ತೈತೆ ಅಂತ ಈ ಬೆಂಗ್ಳೂರ್ಗೆ ಬಂದೆ ನನ್ನೊಡ್ಯಾ. ಹಾಳೂರು ಬುದ್ದಿ, ಇದು ಹಾಳೂರು. ಸಾಚಾ ಮನ್ಸರ್ನೆಲ್ಲ ಗಲೀಜ್ ಮಾಡ್ತೈತ್ರೆ. ಕೂಲಿ ಮಾಡಿ ಜೀವಣ ಮಾಡೋಣ ಅಂದ್ರೆ ಅದು ಸಾಗ್ನಿಲ್ಲ. ಒಂದೊತ್ತು ಒಟ್ಟೆ ತುಂಬದ್ರೆ ಇನ್ನೊಂದೊತ್ತು ಉಪಾಸ. ಮಾನಾ ಮರ್ಯಾದೆ ಬಿಟ್ಟೆ ಬಿಕ್ಸಕ್ಕೆ ಒರಟ್ರೆ ಅವತ್ತು ನೀವೇ ನೋಡ್ಡಿಲ್ವ ಬುದ್ದಿ-ನೀವು ಆಗ ಬಸ್ವನ್ ಗುಡೀಲಿ ಇದ್ರುಲ್ಲ-ಅದೆಂತಾದೋ ರಸ್ತೆ ಕರಾಸ್ ರಸ್ತೇಲಿ—ನಿಮ್ಮನೆ ಪಕ್ಕದಲ್ಲಿರ್ನಿಲ್ವಾ ಆ ಬಂಗ್ಲೆ—ಅಲ್ಲಿ ಬಿಕ್ಸಕ್ವಾದ್ರೆ ಆ ಯಮುದರ್ಮ ಕೆನ್ನೇಗೆ ಬಿಗದ. ಆಗ ನೀವು ನನ್ಮೇಲಿ ದಯಮಾಡಿದ್ರಿ ಬುದ್ದಿ. ಆದ್ರೆ-ನನ್ ಗರಚಾರ—ಹಾದೀಲೋಗೋ ಆ ನಾಯ್ಗೋಳು ನನ್ನ ಪೋಲೀಸ್ ಟಾಣೇಗೆಳ್ಕೊಂಡೋದ್ರು. ಅಲ್ಲಿ, ಅವ ರೆಲ್ಲಾ ನಾನು ಆ ಬಂಗ್ಲೇಲಿ ಕದ್ಯೋಕೆ ಒಂಚಾಕ್ತಾ ಇದ್ದೆ ಅಂತ ಯೋಳದ್ರು. ಅದೇನು ಸುಳ್ಳು ಬುದ್ದಿ! ಏನೋ ನನ್ ಪಾರಬ್ದ, ಕದ್ಯೋ ಚಾಳಿ ವಸಿ ದಿವ್ಸ ನನ್ ಗಂಟ್ ಬಿತ್ತು ಅಂತ ಇಟ್ಕೋಳಿ. ಆದ್ರೆ ನಾನು ಕದ್ದಾಗ್ಲೂ ಸುಳ್ಳೇಳ್ತಿರ್ನಿಲ್ಲ ಬುದ್ದಿ. ಆ ಪೋಲೀಸ್ ನೋರ್ಗೇನು—ಅಷ್ಟೇ ಸಾಕಾಯ್ತು. ನಾನ್ ಕದ್ದೆ ಅಂತ್ಲೇ ಮಾಡ್ ಬಿಟ್ರೂ. ಸಾಚಾ ಮನ್ಸರ್ನ ಕಳ್ರನ್ನ ಮಾಡ್ದೆ ವಾದ್ರೆ

ಅವರ್ಗೆ ನಂಬ್ಕೆ ಸಿಗ್ಬೇಕಲ್ಲ. ಸರಿ ನನ್ ಕಳ್ಳನ್ಮಾಡ್‌ಬಿಟ್ರು ಕೊನ್ಗೂನು. ಕದ್ ಸಾಮಾನೆಲ್ಲಿ? ಎಲ್ಲೆಲ್ಲಿ ಮಡ್ಗಿದ್ದೀ? ಎಸ್ಟು ದಿನದಿಂದ ಕದೀತಾ ಇದೀಯ ಅಂತ ಪೀಡ್ಸೋದಕ್ಕೆ ಸುರುಹಚ್ಕಿದ್ರು. ನಾನು ನಿಜ ಹೇಳಿದ್ರೆ ಕೇಳ್ಬೇಕಲ್ಲ. ನಿಜಾ ಏಳ್ದಷ್ಟೂ ಬಾರ್ನೇಟ್ ಜೋರಾಯ್ತು. ನಿಜಕ್ಕಾಲಾ ಅಲ್ಲ ನಾನು ಇದು. ಏಟ್ ತಪ್ಪಿಸಿಕೊಳ್ಳೋಕೆ ಸುಳ್ ಯೋಳ್ದೆ ನನ್ನೊಡ್ಯಾ. ಅದೊಂದೇ ಸಲ ನಾನು ಸುಳ್ಳೇಳಿದ್ದು. ಕದೀದೇ ಇದ್ದಾಗ ಸುಳ್ಳೇಳ್ದೆ. ಕದ್ದಾಗ ನಾನ್ಯಾಗ್ಲೂ ಸುಳ್ಳೇಳ್ತಿರ್ಲಿಲ್ಲ.

‘ನಾನು ಸುಳ್ಳೇಳಿದ ಮ್ಯಾಗೆ ನಾನು ಕಳ್ಳ ಆದೆ. ಸುಳ್ಳ ಏಳ್ದೇ ಇದ್ರೂ ಕಳ್ಳ ಆಗ್ತಿದ್ದೆ. ಸುಳ್ಳು ಏಳಿದ್ರಿಂದ ಏಟ್ ತಪ್ತು. ಒಂದು ಪಕ್ಸದ ಗಂಟ ಜೈಲಿಗಾಕದ್ರು ನನ್ನ. ಅವರ್ಗೂ ಏನ್ ತಪ್ಪಿಲ್ಲ ಅಂತ ಮಡಿಕ್ಕೊಳ್ಳಿ. ಸರ್ಕಾಲಿ ಡೂಟಿ ಅವ್ರು ಜರಗಿಸಬಟ್ರು. ನನ್ನಣೇಬರ, ಅಸ್ಟೆ.

‘ಜೈಲ್‌ನಿಂದ ಹೊರಿಕ್ ಒಂದ ಮ್ಯಾಗೆ ನಮ್ಕೇರಿಗೆ ಹ್ವಾದೆ. ಒಬ್ರಾದ್ರೂ ನನ್ ಮಾತಾಡಿಸ್‌ಬೇಕಲ್ಲ. ಹೈಕ್ಳೆಲ್ಲ ಕಳ್ಳಾ ಕಳ್ಳಾ ಅಂತ ಕೂಕ್ಕೊಳ್ತಿದ್ರೋ.

‘ಅವತ್ನಿಂದ ಕಳ್‌ತನ ನನ್ ಕಸ್ಬಾಯ್ತು ಬುದ್ದಿ. ಆದ್ರೂ ಸುಳ್ಮಾತ್ರ ಹೇಳ್ತಿರ್ಲಿಲ್ಲ. ಏಟೋ ಸಲ ಪೋಲೀಸ್ನೋರ್ ಕೈಗೆ ಸಿಕ್ತಾನೇ ಇರ್ಲಿಲ್ಲ. ಸಿಕ್ಬಿದ್ರೆ, ಕದ್ದೆ ಕಸ್ಟದ್ದುಂಟು ಅಂತ ಹೇಳಿ ಕದ್ದೊಡ್ವೆ ಮುಂದಿಕ್‌ಬಿಡ್ತಿದ್ದೆ.

‘ಆದ್ರೆ ಕಳ್ತನ ಮಾಡೋವಾಗ ಹಾಳು ಈ ಗಲೀಜ್ ಕೆಲ್ಸ ಮಾಡ್ಬಾರ್ದು ಅನ್ನಿಸ್ತಿತ್ತು; ಬಿಕ್ಸಾನಾದ್ರೂ ಮಾಡಿ ಮಾನ್ವಾಗಿ ಬದ್ಕೋಣ ಅನ್ನಿಸ್ತಿತ್ತೊ. ಆದ್ರೆ ಒರ್ತಾ ಬರ್ತಾ ಕಳ್ತನ ಅನ್ನೋದು ಸರ್ವೆ ಸಾಧಾರಣ ಆಗೋಯ್ತು. ಕುಂಟಾದ್ಮೇಲೆ ತಾನೆ ಈಗ ಬಿಕ್ಸಾನೆ ನನ್ ಕಸ್ಬು. ಆದ್ರೆ ಕಳ್ತನಾನೆ ವಾಸಿ ಅನ್ನಿಸ್ತದೆ. ಕಳ್ನಾಗೋದಕ್ ಮೊದ್ಲು ಕೂಲಿ ಹುಟ್ತಿರ್ಲಿಲ್ಲ. ಬಿಕ್ಸಕ್ಕೇನಾದ್ರೂ ಹೊಂಟ್ರೆ ‘ದಾಂಡಿಗ ನಿನ್ಗ್ಯಾಕೋ ಬಿಕ್ಸ, ಗೆಯ್ಯೋಗೊ’ ಅಂತಿದ್ರು. ಈಗ ಕಾಲ್ಮುರ್ಕೊಂಡು ಕುಂಟಾಗಿನ್ನಿ—ಗೆಯ್ಯೋಕೆ ತರಾಣ ಇಲ್ಲ. ಈಗ್ಲೂ ಬಿಕ್ಸ ಹುಟ್ಟೋಕಿಲ್ಲ.’

ಇಲ್ಲಿಗೆ, ಒಮ್ಮೆ ಏದುಸಿರೆಳೆದುಕೊಂಡು ರಂಗ ತನ್ನ ಮಾತನ್ನು ಕೊಂಚ ನಿಲ್ಲಿಸಿದ. ಅವನು ಕುಂಟ ಎನ್ನುವುದು ಆಗ ಜ್ಞಾಪಕಕ್ಕೆ ಬಂದು

ಜಗುಲಿಯ ಮೇಲೆ ಕುಳಿತುಕೋ ಎಂದೆ. ಅಲ್ಲಿಯ ವರೆಗೂ ಅವನು ಊರು ಗೋಲಿನ ಸಹಾಯದಿಂದ ನಿಂತುಕೊಂಡೇ ಮಾತನಾಡುತ್ತಿದ್ದ.

ರಂಗ ಜಗುಲಿಯ ಮೇಲೆ ಕುಳಿತುಕೊಂಡು ತನ್ನ ಕಥೆ ಮುಂದುವರಿಸಿದ. ಅವನು ಮೊದಲುಮಾಡುವ ಮುನ್ನ 'ಕಾಲು ಯಾಕೆ ಕುಂಟು?' ಎಂದು ಕೇಳಿದೆ.

ರಂಗ ಮೊದಲುಮಾಡಿದ:

'ಅದ್ರುದ್ದೆ ಒಂದು ಕಥೆ ಬುದ್ಧಿ. ಒಂದ್ಸಲ ಒಬ್ಬರ್ ಮನೇಗೆ ಕದ್ಯೋಕೆ ಹೋಗಿದ್ದೆ. ಹಗಲೊತ್ತು ಅನ್ನಿ. ನಾನು ಕಾಂಪೋಂಡ್ ಗೋಡೆ ಇಳಿಬೀಳ್ತಾ ಇದ್ದದ್ನ ಮನೆ ಜವಾನ ಕಂಡ. ಕಂಡಿ, ಅಟ್ಟಿಸ್ಕೊಂಡ್ ಬಂದ. ನಾನು ಹಿಮ್ಮಳ್ಳಿ ಗೋಡೆ ಹಾರ್ದೆ. ಹಿಂಸ್ಗಡೆ ಮೋರೀಗೆ ಕುಕ್ಕರ್ಸ್ಕೊಂಡ್ ಬಿದ್ದೆ. ಮಂಡಿ ಚಿಪ್ಪು ಕಳಕ್ ಅಂತು. ಹಾಗೇ ಎದ್ದು ಓಡ್ದೆ. ಅವನ ಕೈಗೆ ಸಿಕ್ಲಿಲ್ಲ. ಮನೆಗೆ ಹೋಗಿ ಬಿದ್ದೆ. ಎರಡು ಮೂರು ತಿಂಗಳ್ ಗಂಟ ಮನೆ ಬಿಟ್ಟು ಕದ್ಯೋಕಾಗ್ಲಿಲ್ಲ, ಕಾಲು ಅಟೊಂದು ಬಾದೆ ಕೊಡ್ತಿತ್ತು. ಅವತ್ನಿಂದ್ಲೆ ಕಳ್ತನನೂ ತಪ್ಪೋಯ್ತು. ಬಿಕ್ಸಾ ಮಾಡಿಕೊಂಡವ್ನಿ. ಏನ್ ಬಿಕ್ಸಾನೋ ಬಿಕ್ಸ. ಕಳ್ತನಾನೇ ಏಸೋ ಮೇಲಾಗಿತ್ತು. ಅಪ್ಪಿ ತಪ್ಪಿ ಕಳ್ತನ ಮಾಡಿ ಸಿಕ್ಕಿದ್ ವಡ್ವೆ ನನ್ನ ಮುದುಕವ್ವ ಯೆಡ್ತಿ ಮಗ ಇವರ ಜೀವಣಕ್ಕೆ ಸಾಕಾಗ್ತಾ ಇತ್ತು. ಈಗ ಒತ್ತಾರೆ ಇಂದ ಸಂಜೆ ಗಂಟ ಸುತ್ತಿದ್ರೂ ಜೀವಣಕ್ಕೆ ಎಟಕ್ಸೋಕಿಲ್ಲ. ಹೈಕಳ್ ಬೇರೆ ಹೆಚ್ತಾವೆ. ನನ್ನೆಡ್ತಿ ಸುಮ್ಕೆ ಹಡೀತಾನೇ ಅವ್ಳೆ. ಅದೇನ್ ಮಾರಾಯಾ ದೇವ್ರೋ! ಹಿಟ್ಟು ಕೊಡ್ದೆ ಹಿಂಡಿಂಡ್ ಹೈಕಳ್ ಕೊಡ್ತವ್ನೆ. .ಆಗ ನಾನೇನಾದ್ರೂ ಸಿಕ್‌ಬಿದ್ನೊ ಪೋಲೀಸ್ನೋರ್ ಕೈಗೆ, ಸಾಫ್ ಸೀದ ನನ್ ಕಳ್ತನ ಒಪ್ಪಿಕೊಂಡ್ ಬಿಡ್ತಿದ್ದೆ. ಎಂಗೋ ಒಂದೆರಡ್ ತಿಂಗ್ಳು ಜೈಲುವಾಸ ಅನ್‌ಬೋಗಸ್ತ ಇದ್ದೆ.

'ಅದಿರ್ಲಿ ಬುದ್ದಿ. ಈಗಂತೂ ಬಿಕ್ಸ ಮಾಡ್ತೀನಲ್ಲ. ಕಳ್ರಂಗ ಕಳ್ರಂಗ ಅನ್ನೋ ಎಸರ್ ತಪ್ಲಿಲ್ಲ ನೋಡಿ. ಅದೇನ್ ಜನಾನೋ ನಮ್‌ಜನ— ಒಂದೆಸರ್ ಮಡಿಗ್‌ಬಿಟ್ಟ್ರೆ ಅಂದ್ರೆ ಒಬ್ಬನ್ಗೆ—ಅವನ್ಗಾ ಯೆಸ್ರು ಅವರಪ್ಪ ಇಟ್ಟು ಕರ್ದಂಗೆ. ನಾನು ಕಳ್ತನ ಬಿಟ್ಟು ಏಟೋ ದಿವ್ಸ ಆಗಯ್ತೆ. ಕಳ್ರಂಗ ಅನ್ನೊ ಎಸ್ರು ತಪ್ಲಿಲ್ಲ. ಇನ್ನೂ ನಾನ್ ಕಳ್ಳ ಬುದ್ದಿ. ನಾನ್ ಕಳ್ಳ!

ಕಳ್ರಂಗ! ಅಯ್ಯೋ, ನೆಗ ಬರ್ತ್ತೈತೆ. ಆದ್ರೆ ನನ್ಗೇನವ್ಮಾನ ಇಲ್ಲ ಬುಡಿ ಬುದ್ದಿ. ಆ ನಮ್ಮಪ್ಪ ಕ್ರಿಸ್ನಾನೆ ಕಳ್ನನ್ ಮಗ| ಅನ್ನಿಸ್‌ಕೊಂಡಿರೋವಾಗ ನನ್ಗೇನ್ ಬುದ್ದಿ? ಆ ನಮ್ಮಪ್ಪಂಗಾ ಗೊತ್ತು ಯಾರ್ ಕಳ್ರು ಯಾರ್ ಸಾಚಾ ಅಂತ. ನಮ್ಗೆ ನಿಮ್ಗೆ ಏನ್ ಗೊತ್ತಾಗ್ತೈತ್ರು. ಯಾರ್ ಕಳ್ಳ ಅಲ್ಲ ಅಂತ ನಾನ್ ಕೇಳೋದು. ತಾವ್ ಕೋಪಿಸಕೋ ಬೇಡಿ ಬುದ್ದಿ. ಎಲ್ರೂ ಕಳ್ರೆ ಅಂತ ನಾನ್ ಯೋಳೋದು. ನಮ್ಮಂತ ಗರೀಬರ್ ಕಳ್ತನ ಗೊತ್ತಾಗಾ ತ್ತೈತೆ, ಅಸ್ಟೆ. ನಾನು ರಾಜಾರೋಸ್ವಾಗ್ ಕಳ್ತನ ಮಾಡ್ತಿದ್ದೆ. ಸಾಚಾ ಅನ್ನೊಸ್ಕಂಡಿರೋ ಮನ್ಸರವ್ರಲ್ಲ, ಅವ್ರು ಒಳೊಳ್ಗೇ ಕಳ್ತನ ಮಾಡ್ತವ್ರೆ. ದೊಡ್ ಮನಸ್ರು ಅನ್‌ಸ್ಕೊಂಡಿರೋರೆಲ್ಲ ಕಳ್ರೆ ಬುದ್ದಿ. ಅವ್ರೆಲ್ಲ ನುಮ್ಕೆ ಕುಂತಿದ್ರೂ ಅವ್ರ ಮಾಡಿ ಮನೆಗೋಳು ಬಡ್ತಿ ಜಗ್ತಾನೆ ಅವೆ. ಅವ್ರೆಲ್ಲ ಮೈಗಳ್ರು ಬುದ್ದಿ. ನಮ್ ಗರೀಬ್ರು ಅನ್ನ ಕದ್‌ಕೊಂಡವ್ರು ಅವ್ರೆಲ್ಲ. ಸರ್ಕಾರದ್ ಪೋಲೀಸ್ನೋರೆಲ್ಲ ಅವ್ರ ಹಣದ್ ಪೆಟ್ಗೆ ಕಾಯ್ಕೊಂಡವ್ರೆ; ಅವರ್ನಿಗಾ ಎಲ್ಲಾ ನಮ್‌ಗರೀಬರ್ ಮೇಲೈತೆ.

'ನಾನೂ ಏಟೋ ಸಲ ಕನ್ನ ಆಕ್ದೆ, ಪೆಟ್ಗೆ ಒಡ್ದೆ, ಜೆಬಾರಿಸ್ದೆ. ಆದ್ರೆ ಗರೀಬ್ರ ಹಟ್ಟಿ ಹೊಕ್ಕಿಲ್ಲ ನಾನು. ನನ್ ಬಾವಮೈದ ಒಬ್ಬ ಪೂರಾ ಸಾಲ ಮಾಡಿದ್ದ. ನಾನು ಕದ್ದ ಹಣದಲ್ಲಿ ಅವನ್ ಸಾಲಾ ತೀರಿಸ್ದೆ. ಈಗವ್ನು ಎಲ್ಲೋ ನೆಮ್ಮದಿಯಾಗವ್ನೆ ಅಂತ ಇಟ್‌ಕೊಳ್ಳಿ. ನಾವು ದೊಡ್ ಮನ್ಸರ್ಮನೆ ದೋಚಿದ್ರೆ ನಮ್‌ದುಡ್ಡು ನಾವ್ ತಕ್ಕೊಂಡಂಗೆ ನನ್ ಲೆಕ್ಕಾಸಾರ. ಅದು ಕಳ್‌ತನಾನಾ ಸಾಮಿ? ನಾನೇಳಿದ್ರಲ್ಲಿ ಏನಾದ್ರು ತಪ್ಪಿದ್ರೆ ಏಳಿ ಸಾಮಿ, ನಿಮಗ್ಸರಣು ನಾನು. ಈಟಕ್ಕೂ ನಾನ್ ಕಳ್‌ತನ ಬುಟ್ಟೆ ಏಟೋ ದಿನ ಆಯ್ತು. ಅದರ್ವಿಚಾರ ಯಾಕಿನ್ನು. ಆದ್ರೂ ಕಳ್ರಂಗ ಅನ್ನೊ ಎಸರ್ ತಪ್ಲಿಲ್ಲ. ಆದ್ರೆ ನನ್‌ಗೇನೂ ಎದರ್ಕೆ ಇಲ್ಲ. ಆಗ ರಾಜಾರೋಸ್ವಾಗಿ ಕಳ್‌ತನ ಮಾಡ್ತಿದ್ದೆ; ಈಗ ರಾಜಾರೋಸ್ವಾಗಿ ಬಿಕ್ಸ ಮಾಡ್‌ತಿವ್ನಿ. ಕಾಲೊಂದ್ ಗಟ್ಯಾಗಿದ್ದು ತಮ್ಮಂತೋರ್ ಪಾದ್ನೇವೆ ಸಿಕ್ಕಿದ್ರೆ, ನಾನೂ ಗಂಡೂ ಅಂತ ಗೆಯ್‌ತಿದ್ದೆ. ನನ್ನೆಡ್ತಿನೋ—ಚಚ್‌ಕಿಲ್ಲ ಅವ್ಳು, ಎಲ್ಲಾದ್ರೂ ಜೀತಕ್‌ಸೇರ್ಕೊಳ್ಳೋಣ ಅಂದ್ರೆ. ಎಲ್ಲ ನಮ್ಮಪ್ಪ ತಿರ್ಪತಿ ತಿಮ್ಮಪ್ಪ ನಡಸ್ದಂಗೆ, ನಮ್ ಯತ್ನ ಏನ್ ನಡೀತೈತ್ರು, ಅಲ್ಲಾ ಬುದ್ದಿ?'

ಇಲ್ಲಿಗೆ ರಂಗ ತನ್ನ ಕಥೆ ನಿಲ್ಲಿಸಿದ ಹಾಗೆ ತೋರಿತು. ನಾನೂ ಸುಮ್ಮನೆ ಕೇಳುತಿದ್ದರೆ ಇನ್ನೂ ಮುಂದುವರಿಸುತಿದ್ದನೆಂಬುದರಲ್ಲಿ ಸಂದೇಹವಿಲ್ಲ.

'ನಿನ್ನ ಹೆಂಡತಿಯನ್ನು ನಾಳೆ ಕರೆದುಕೊಂಡು ಬಾರೋ. ನೋಡೋಣ ನಮ್ಮ ಮನೆಯಲ್ಲಿ ಮುಸುರೆ-ಗಿಸರೆ ಕೆಲ್ಸ ಇದ್ದರೆ ಕೇಳಿ ಕೊಡಿಸುತ್ತೀನಿ' ಎಂದೆ ನಾನು.

ರಂಗ ಪರಮಾನಂದದಿಂದ ಬಾಯಿಬಿಟ್ಟು 'ಆಗ್ಲಿ ಸನ್ನೊಡ್ಯಾ. ಬಗ್ವಂತ ನಿಮ್ಮನ್ನ ತಣ್ಣಗೆ ಮಡ್ಗಿರ್ಲಿ. ನಿಮ್ಮಂತ ದೊಡ್ ಮನ್'ಸ್ರು ಚಾಕ್ರಿ ಕೇಳ್ದೋರ್ಗೆ ಚಾಕ್ರಿ ಕೊಟ್ಟು, ಬಿಕ್ಸ ಕೇಳ್ದೋರ್ಗೆ ಬಿಕ್ಸ ಕೊಟ್ಟು ಸಲೀಸಾಗಿದ್ರೆ ನನ್ನೋಂತೋರು ಕಳ್'ತನ ಯಾಕ್ ಮಾಡಾರು ಬುದ್ದಿ? ಕಳ್'ತನ ಮಾಡಾಕೇನ್ ಕೈತೀಟೇನ? ಹಾಳೊಟ್ಟೆ ಬುದ್ದಿ, ಪಾಪಿ ವೊಟ್ಟೆ. ಇರ್ಲಿ ಬುದ್ದಿ ಇನ್ನೊಂದಿನ ಬರ್ತೀನಿ' ಎಂದು ಹೊರಡಲುದ್ಯುಕ್ತನಾದ.

'ಭಿಕ್ಷ ಬೇಡವೇನೋ? ನಿಂತುಕೋ,' ಎಂದು ಒಳಕ್ಕೆ ಹೋಗಿ ಅಕ್ಕಿ ತಂದು ಹಾಕಿ ಕೈಗೆ ಒಂದಾಣೆ ಹಾಕಿದೆ. ಅವನು ಪರಮಸಂತೋಷದಿಂದ, ಕುಂಟುತ್ತ ಮುಂದಕ್ಕೆ ಹೋದ.

* * * * *

ಕಳ್ಳ ರಂಗನ ಮಾತು ಸುಳ್ಳಲ್ಲ—ಎಂದು ಆಗ ನನಗೆ ತೋರಿತು. ಯಾರು ಕಳ್ಳರಲ್ಲ? ನಾನು ಸಹ ಕಳ್ಳನಲ್ಲವೇ? ಎಂದು ನನಗೆ ನಾನೇ ಪ್ರಶ್ನಿಸಿಕೊಂಡೆ ಆಗ. ಅವನಷ್ಟು ಧೈರ್ಯವಾಗಿ ಎಲ್ಲರೂ ಕಳ್ಳರೇ ಎಂದು ನಾನು ಹೇಳಲಾರೆ. ನನ್ನ ನಡವಳಿಕೆಯನ್ನು ನಾನೇ ಪರೀಕ್ಷಿಸಿಕೊಂಡಿದ್ದರಲ್ಲಿ, ನನ್ನ ಬಾಲ್ಯದಿಂದ ಅದುವರೆಗೆ ಲೆಕ್ಕವಿಲ್ಲದಷ್ಟು ಕಳ್ಳತನಗಳನ್ನು ಮಾಡಿದ್ದು ನನ್ನ ನೆನಪಿಗೆ ಬಂದು ನನಗೆ ನಾನೇ ಭಯಪಟ್ಟು ನಡುಗಿದೆ.

ಹಾಗೆ ಪ್ರತಿಯೊಬ್ಬನ ಬದುಕನ್ನೂ ಪರೀಕ್ಷಿಸುತ್ತ ಹೋದರೆ ಜೀವನವೇ ದುಸಾಧ್ಯವಾದೀತು ಎಂದು ಸಮಾಧಾನ ಹೊಂದಿದೆ.

ಕಳ್ಳರ ಕಳ್ಳತನಕ್ಕೆ ಯಾರು ಹೊಣೆ ಎನ್ನುವುದಕ್ಕೆ ಕಳ್ಳ ರಂಗನ ಅನುಭವಸಿದ್ಧವಾದ ಉತ್ತರವಿದ್ದರೂ ನನ್ನ ಮನಸ್ಸಿನಲ್ಲಿ ಅದು ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ.

# ಗೋಪಿಯ ಗೆಲವು   

ಆಫೀಸು ಬಿಟ್ಟ ಕೂಡಲೆ ಮನೆಗೆ ಬಾ ಎಂದು ಗೋಪಿ ಹೇಳಿದ್ದ. ಏನು ಕೆಲಸವಿದ್ದರೂ ಬಿಟ್ಟು ಈಗ ಪ್ರತಿದಿನವೂ ಬೆಳಗ್ಗೆ ಸಂಜೆ ಅವನ ಮನೆಗೆ ಹೋಗುತ್ತಿದ್ದೆ. ಬೆಳಗ್ಗೆ ಹೋಗಿ, ಓವಲ್‌ಟೈನ್ ಮಾಡಿಕೊಟ್ಟು, ಬ್ರೆಡ್ಡು ಹಾಲು ಎಲ್ಲವನ್ನೂ ಸಿದ್ಧಮಾಡಿಕೊಟ್ಟು ಬರುತ್ತಿದ್ದೆ; ಸಂಜೆ ಮಾರ್ಕೆಟ್ಟಿಗೆ ಹೋಗಿ ಕಿತ್ತಳೆಯ ಹಣ್ಣು ತಂದುಕೊಟ್ಟು, ಎಂಟುಗಂಟೆಯ ಹೊತ್ತಿಗೆ ಮನೆಗೆ ಬರುತ್ತಿದ್ದೆ; 'ನಿಮಗೂ ತೊಂದರೆ; ಅವರಿಗೂ ಪಾಪ ಮನೆಯಲ್ಲಿ ಯಾರೂ ನೋಡಿಕೊಳ್ಳುವವರು ಇಲ್ಲ, ಬೇಜಾರಾಗುತ್ತೆ. ನಮ್ಮ ಮನೆ ಯಲ್ಲೇ ಬಂದು ಕೆಲವು ದಿನ ಇರುವ ಹಾಗೆ ಹೇಳಿ ಅಂದ್ರೆ' ಎಂದು ಸುಶೀಲ ಏನೋ ನನಗೆ ಹೇಳಿದಳು. ನಾನೂ ಗೋಪಿಗೆ ಹಾಗೇ ಹೇಳಿದೆ. ಆದರೆ ಅವನು ನನ್ನ ಮಾತು ಕೇಳಲಿಲ್ಲ. ಯಾವಾಗಲೂ ಯಾರ ಮಾತನ್ನೂ ಸರಿ ಯಾಗಿ ಕೇಳಿದವನಲ್ಲ ಗೋಪಿ. ಒಂದು ಬಗೆಯ ಹಠದ ಸ್ವಭಾವ; ಒಂದು ಬಗೆಯ ಅಹಂಕಾರವಲ್ಲ-ಆತ್ಮವಿಶ್ವಾಸ, ಆತ್ಮಗೌರವ. ಅವನ ಎದುರು ನನ್ನ ಬದಲುಮಾತು ನಡೆಯುತ್ತಿರಲಿಲ್ಲ. ಯಾವಾಗಲೂ ಮಾತಿನಲ್ಲಿ ನನ್ನ ಸೋಲಿಸಿಬಿಡುತ್ತಿದ್ದ. ಅವನ ಮಾತಿನಲ್ಲಿ ಅಷ್ಟು ಬಿಗುವು; ಒಂದು ಆಕರ್ಷ ಣೆಯೂ ಇತ್ತು. ಮಾತಿನ ಆಕರ್ಷಣೆಯ ಜೊತೆಗೆ ಮುಖದಲ್ಲಿ ಇಮ್ಮಡಿ ಯಾದ ಆಕರ್ಷಣೆಯಿತ್ತು.

ಈ ದಿನವೂ ಆಫೀಸು ಬಿಟ್ಟ ಕೂಡಲೆ ನೇರವಾಗಿ ಅವನ ಮನೆಗೆ ಹೊರಟೆ. ಅವನಿಗೆ ಕಿತ್ತಳೆಹಣ್ಣು ತಗೆದುಕೊಳ್ಳುವುದನ್ನು ಸಹ ಮರೆತೆ; ಕೂಡಲೆ ಅವನ ಮನೆಗೆ ಹೋಗಬೇಕೆಂಬುದೇ ನನ್ನ ಮನಸ್ಸಿನಲ್ಲಿದ್ದುದು.

ಹಾಸಿಗೆಯ ಮೇಲೆ ಮಲಗಿರುತ್ತಿದ್ದವನು, ಹೊರಕ್ಕೆ ಹೊರಡಲು ಸಿದ್ಧನಾಗಿ ' ಈಜಿಚೇರಿ 'ನ ಮೇಲೆ ಕುಳಿತಿದ್ದ. ತೊಡೆಯ ಮೇಲೆ ಷೇಕ್ಸ್ಪಿಯರ್ ' ಇತ್ತು.

ನಾನು ಹೋದ ಕೂಡಲೆ ' ಇದೇನಿದು ! ' ಎಂದೆ. ' ಏನೂ ಇಲ್ಲ, ಮೊದಲಿನಂತೆ ನೀನು ಕೇಳಿದ್ದಕ್ಕೆಲ್ಲ ಸಮಾಧಾನ ಹೇಳುವ ಚೈತನ್ಯ ನನಗೆ ಈಗ ಇಲ್ಲ. ನಿನಗೆ ಗೊತ್ತಿದೆ. ಸುಮ್ಮನೆ ನಾನು ಹೇಳಿದ ಹಾಗೆ ಕೇಳು. ಹೋಗಿ ಒಂದು ' ಟಾಂಗ ' ಮಾಡಿಕೊಂಡು ಬಾ. ಸ್ವಲ್ಪ ಪೇಟೆಯ ಕಡೆ ಹೋಗಬೇಕು ' ಎಂದ. ಸರಿ; ಇವನ ಸಂಗಡ ವಾದಿಸಿ ಪ್ರಯೋಜನವಿಲ್ಲ ಎಂದು ' ತಥಾಸ್ತು ' ಎಂದೆ.

ಗಾಡಿಯ ಮೇಲೂ ಸಹ ಅವನ ಕೈಲಿ ' ಷೆಕ್ಸ್‌ಪಿಯರ್ '. ' ಇದೇನು ದಾರಿಯುದ್ದಕ್ಕೂ ಓದುತ್ತೀಯ ? ' ಎಂದು ಕೇಳಿದೆ. ಅವನಿಗೇ ಆಶ್ಚರ್ಯವಾಯಿತು; ಮರೆತು ಹಾಗೆಯೆ ಕೈಲಿ ಹಿಡಿದುಕೊಂಡುಬಂದಿದ್ದ. ಅದನ್ನು ನಾನು ತೆಗೆದುಕೊಂಡು ಹಾಗೆಯೇ ಹಾಳೆಗಳನ್ನು ತಿರುವುತ್ತಾ, ಆಫೀಸು ವಿಚಾರ, ಈಗಿನ ಕಾಲದ ಖಾಯಿಲೆಗಳ ವಿಚಾರ, ಸಿನಿಮಾ ವಿಚಾರ ಎಲ್ಲ ಅವನಿಗೆ ' ಲೆಕ್ಚರ್ ' ಕೊಡುತ್ತಿದ್ದೆ. ಅವನು ಆರೋಗ್ಯದಿಂದಿದ್ದರೆ, ಅವನ ' ಲೆಕ್ಚರ್ ' ಕೇಳುವುದೇ ಹೊರತು ಹೇಳುವ ಅವಕಾಶವೆಲ್ಲಿ ನನಗೆ !

' ರಾಜೇಶ್ವರೀ ಹಾಲಿ 'ನ ಬಳಿ ಗಾಡಿ ನಿಲ್ಲಿಸಹೇಳಿ, ಇಳಿದು ಅಂಗಡಿಯೊಳಕ್ಕೆ ಹೋದ. ಮರುಮಾತಾಡದೆ ಹಿಂಬಾಲಿಸಿದೆ. ಸುಮ್ಮನಿದ್ದೆ. ಬಗೆ ಬಗೆಯ ರೇಶ್ಮೆ ಸೀರೆಗಳನ್ನು ತರಿಸಿ ಗುಡ್ಡಹಾಕಿಸಿದ. ಸುಮ್ಮನಿದ್ದೆ. ಅವನೇ ಕೇಳಿದ:

' ಯಾವುದು ಚೆನ್ನಾಗಿದೆ ಸೀತು ? '

' ಯಾರಿಗೆ ? ' ಎಂದು ಕೇಳಿದೆ.

' ಅದೆಲ್ಲ ಕಟ್ಟಿಕೊಂಡು ನಿನಗೇನು ? ' ಎಂದ— ಅವನ ತುಟಿಯಲ್ಲಿ ತುಂಟುನಗೆ ತೋರುತ್ತಿತ್ತು.

ಹೀಗೆಂದು ಹೇಳಿದ್ದಿದ್ದರೆ ಸುಶೀಲೆಯನ್ನೂ ಕರೆದುಕೊಂಡು ಬರುತ್ತಿದ್ದೆ ಸಲಹೆ ಕೊಡುವುದಕ್ಕೆ. ಅದಿರಲಿ; ಸೀರೆ ಉಟ್ಟುಕೊಳ್ಳುವವರ ಮನಸ್ಸು ಆಸೆ ಏನೂ ಗೊತ್ತಿಲ್ಲದೆ, ಸೀರೆ ಯಾರಿಗೆ ಎನ್ನುವುದು ಗೊತ್ತಿಲ್ಲದೆ, ನಾನು ಹೇಗೆ ಸಲಹೆ ಕೊಡಲಿ? ಅದು ಸಾಧ್ಯವಿಲ್ಲ. '

' ನಿನ್ನ ಹೆಂಡತಿಗೆ ಎಂದು ತಿಳಿದುಕೋ. ಅದೇ ಆಕಾರ, ಅದೇ ಎತ್ತರ, ಅದೇ ಬಗೆಯ ಆಸೆಯೂ ಇರಬಹುದು. ನಿನ್ನ ಹೆಂಡತಿಗೆ ಸೀರೆ ತಂದಿಲ್ಲವೆ ನೀನು? ಬೇಗ ಹೇಳು, ಹೆಚ್ಚು ಹೊತ್ತು ನಿಲ್ಲಲಾರೆ. '

' ನಿನಗೇನು ದುಡ್ಡು ಗಿಡ್ಡು ಹೆಚ್ಚಾಗಿದೆಯೋ ಅಥವಾ ನನ್ನನ್ನು ಅಪಮಾನ ಮಾಡಬೇಕೆಂದೋ ಈ ಅಂಗಡಿಯವರೆದುರಿನಲ್ಲಿ? ' ಎಂದು ಹಾಸ್ಯವಾಗಿ ಕೇಳಿದೆ.

' ಯಾರಿಗಾದರೂ ಆಗಲಿ, ಎಲ್ಲ ತಾನಾಗಿ ಗೊತ್ತಾಗುತ್ತೆ, ಆತುರವೇಕೆ? ನಾನು ಕೇಳಿದಷ್ಟು ಹೇಳು. ' ಎಂದು ವಾದವನ್ನು ಮುಕ್ತಾಯ ಮಾಡಿಯೇ ಬಿಟ್ಟ.

ಹೆಮ್ಮೆಯ ಮಾತೇನೂ ಅಲ್ಲ; ಹೆಂಗಸರ ಸಲಹೆಯಿಲ್ಲದೆ ನಾಜೂಕಾದ ಸೀರೆ ತೆಗೆಯುವುದರಲ್ಲಿ ನಾನು ಬುದ್ಧಿವಂತ ಎಂದು ನನ್ನವಳಿಗೆ ಅವಳ ಗೆಳತಿಯರೆಲ್ಲ ಹೇಳಿಬಿಟ್ಟಿದ್ದಾರೆ. ಗೋಪಿಗೆ ಇದು ಹೇಗೆ ಗೊತ್ತಾಯಿತೋ ಆಶ್ಚರ್ಯ.

ಗೋಪಿ, ನನ್ನ ಸಲಹೆಯ ಮೇರೆಗೆ, ಎರಡು ರೇಶ್ಮೆಯ ಸೀರೆ, ಬ್ಲೌಸ್ ಬಟ್ಟೆ ಎಲ್ಲ ಕೊಂಡುಕೊಂಡು ಗಾಡಿ ಹತ್ತಿದ. ಮಾರ್ಕೆಟ್ಟಿಗೆ ಗಾಡಿ ಹೊಡೆಯಿಸಿದ. ಹಣ್ಣಿನ ಅಂಗಡಿಗೆ ಹೋದದ್ದಾಯಿತು. ಗೋಪಿಯ ಅಪ್ಪಣೆಯ ಪ್ರಕಾರ ಸೇಬು, ಕಿತ್ತಳೆ, ದ್ರಾಕ್ಷಿ ಎಲ್ಲ ಕೊಂಡುಕೊಂಡದ್ದಾಯಿತು. ಬಿಸ್ಕತ್ತು ಪ್ಯಾಕೆಟ್ಟುಗಳನ್ನೂ ಕೊಂಡುಕೊಂಡೆವು. ಸಂಜೆ ಎಂಟರ ಹೊತ್ತಿಗೆ ಅವನ ಮನೆಗೆ ವಾಪಸ್ಸು ಹೋದೆವು.

ಅವನನ್ನು ಬೀಳ್ಕೊಡುವ ಮುನ್ನ— ' ನಾಳೆ ಸ್ವಲ್ಪ ಆಫೀಸಿನಲ್ಲಿ ಮಧ್ಯಾಹ್ನ ಕೇಳಿಕೊಂಡು ಮೂರು ಗಂಟೆಯ ಹೊತ್ತಿಗೆ ಮನೆಗೆ ಬರುತ್ತೀಯ? ' ಎಂದು ಕೇಳಿದ.

ಅವನು ಹೇಳಿದಂತೆ ಕೇಳುವುದು ನನ್ನ ಪದ್ಧತಿಯಾಗಿಬಿಟ್ಟಿದ್ದರೂ, ಅವನು ಕೇಳಿದ್ದಕ್ಕೆಲ್ಲ 'ಯಾಕೆ?' ಎನ್ನುವುದೂ ಪದ್ಧತಿಯಾಗಿಬಿಟ್ಟಿತ್ತು. 'ಯಾಕೆ?' ಎಂದೆ.

'ಸ್ವಲ್ಪ ಕಾಯಿಸಬೇಕು. ಟೇಬಲ್ (ಮೇಜು) ಅರೇಂಜ್ (ಸಿದ್ಧ) ಮಾಡಬೇಕು. ನಿನ್ನ ಸಹಾಯವಿಲ್ಲದೆ ನಾನು ಏನೂ ಮಾಡುವ ಹಾಗಿಲ್ಲ. ಪ್ಲೀಜ್' ಎಂದ.

'ಡಾಕ್ಟರ್ ಬರ್ತಾರೇನೊ?' ಎಂದು ಕೇಳಿದೆ.

'ಹೌದು' ಎನ್ನುವಂತೆ ತಲೆದೂಗಿದ. ನಾನು ಹೊರಟು ಬಂದೆ.

ದಾರಿಯುದ್ದಕ್ಕೂ ಯೋಚನೆ ಮಾಡಿದೆ. ಹಣ್ಣು-ಹಂಪಲು, ಕಾಫಿ ಬಿಸ್ಕಟು ಎಲ್ಲ ಸರಿಹೋಯಿತು. ಸೀರೆ ಯಾರಿಗೆ? ಸುಶೀಲಾಗೇ ಏನಾದರೂ ಕೊಡುತ್ತಾನೆಯೋ? ಅವನು ಆಸ್ಪತ್ರೆಯಲ್ಲಿದ್ದಾಗ ದಿನಕ್ಕೆ ಮೂರು ಸಲ ಅವನನ್ನು ವಿಚಾರಿಸಲು ನಾನು ಹೋಗುತ್ತಿದ್ದ ಮಾತ್ರಕ್ಕೆ ನನ್ನ ಹೆಂಡತಿಗೆ ಸೀರೆ ಕೊಡುವುದೆಂದರೇನು? ಅದರಲ್ಲಿ ಅರ್ಥವಿಲ್ಲ. ಅಥವಾ, ಒಂದು ವೇಳೆ ಕೊಡಬೇಕೆಂದಿದ್ದರೂ ಅವಳನ್ನು ಏಕೆ 'ಟೀ' ಗೆ ಬರಹೇಳಲಿಲ್ಲ? ಡಾಕ್ಟರ್ ಬರುತ್ತಾರೆ, ನಾಚಿಕೆ, ಎಂದು ಸುಮ್ಮನಾದನೋ ಏನೋ—ಅಂತೂ ಯಾವುದೂ ಬಗೆಹರಿಯಲಿಲ್ಲ.

* * * *

ನಾಲ್ಕುಗಂಟೆಯ ಹೊತ್ತಿಗೆ ಸರಿಯಾಗಿ ಎಲ್ಲವನ್ನೂ ಸಿದ್ಧಗೊಳಿಸಿ ಬಿಟ್ಟಿದೆ. ಗೋಪಿಯ ಮುಖದಲ್ಲಿ ಒಂದು ಬಗೆಯ ಉಲ್ಲಾಸ ಒಂದೇ ಸಮನೆ ನಾಟ್ಯವಾಡುತ್ತಿತ್ತು. ಈಗ ಮಾತ್ರ ನಾನು ಹೇಳಿದ್ದ ಹಾಗೆ ಅವನು ಕೇಳಿದ್ದ. ಅತ್ತ-ಇತ್ತ ಓಡಾಡದೆ ಸ್ವಸ್ಥನಾಗಿ ಕುರ್ಚಿಯ ಮೇಲೆ ಕುಳಿತಿದ್ದ.

ನಾಲ್ಕು ಗಂಟೆ ಆಯಿತು. ಗೋಪಿ ಗಡಿಯಾರದ ಕಡೆ ನೋಡಿದ; ಒಂದೆರಡು ನಿಮಿಷ ಅವನ ಆತಂಕದಲ್ಲಿ ಕಳೆಯಿತು; ಬಾಗಿಲಿನಲ್ಲಿ 'ಟಾಂಗ' ನಿಂತ ಸದ್ದಾಯಿತು.

'ಡಾಕ್ಟರ್ ಬಂದರು' ಎಂದೆ. ಗೋಪಿ ಪಟಕ್ಕನೆ ಎದ್ದು ಬಾಗಿಲ ಒಳಿ ಹೋದ.

ಅವನ ಜೊತೆಯಲ್ಲಿ ಒಳಕ್ಕೆ ಬಂದವರು ಡಾಕ್ಟರಲ್ಲ, ಏನಾಕ್ಷಿ, ನರ್ಸ್ (ದಾದಿ).

ಗೋಪಿಯನ್ನು ಆಸ್ಪತ್ರೆಯಲ್ಲಿ ನೋಡಲು ಹೋಗುತ್ತಿದ್ದಾಗ ನನಗೆ ಏನಾಕ್ಷಿಯ ಪರಿಚಯವಾಗಿತ್ತು. ನನ್ನ ಅಲ್ಪಾನುಭವದಲ್ಲಿ, ನಾನು ಆಸ್ಪತ್ರೆಯಲ್ಲಿ ಕಂಡ ನರ್ಸುಗಳಲ್ಲಿ ಅವಳಷ್ಟು ಶ್ರದ್ಧೆ, ವಿಶ್ವಾಸ, ಕನಿಕರ, ಚಟುವಟಿಕೆ ತೋರುತ್ತಿದ್ದ ಬೇರೆ ನರ್ಸು ನನ್ನ ಗಮನಕ್ಕೆ ಬರಲಿಲ್ಲ. ಹೇಳ ಬಹುದಾದರೆ ನಾನು ಕಂಡ ಎಲ್ಲ ನರ್ಸುಗಳ ಪೈಕಿ ಅವಳೇ ಅತ್ಯಂತ ಚೆಲುವೆ ಯಾಗಿದ್ದಳು. ಎಲ್ಲ ರೋಗಿಗಳಿಗೂ ಅವಳೇ ಬೇಕು; ವಿಶ್ವಾಸ ತೋರುವ ನರ್ಸು—ಗಂಡಸಾಗಲಿ ಹೆಂಗಸಾಗಲಿ-ಯಾವ ರೋಗಿಗೆ ಬೇಡ? ಆದರೆ, ಕೆಲವು ರೋಗಿಗಳಿಗೆ ಅವಳ ಮೇಲೆ ಕಾಮಿಸುವ ಕಣ್ಣು. ಇದು ನನ್ನ ತಪ್ಪು ಭಾವನೆಯೇ ಆಗಿರಬಹುದು. ಹೊಸದಾಗಿ ಬಂದಿದ್ದ ಕೆಲವು ತರುಣ ರಾದ ಡಾಕ್ಟರುಗಳಂತೂ ಯಾವಾಗಲೂ ಇವಳ ಒಳಿ ಮುತ್ತಿ ಮುಸುರಿರುತ್ತಿ ದ್ದರು. ಇದರಲ್ಲಿ ತಪ್ಪೇನೂ ಇಲ್ಲ;ತಪ್ಪುತಿಳಿಯಬೇಕಾದ ಪ್ರಮೇಯವೂ ಇಲ್ಲ. ತಾರುಣ್ಯದ ಸ್ವಭಾವ ಇದು, ಮಾನವಸಹಜವಾದ ವರ್ತನೆ. ನಾನು ಸಹ ಏನಾಕ್ಷಿಯನ್ನು ನೋಡಿ ಮೋಹಗೊಳ್ಳದಿದ್ದರೂ ಮೆಚ್ಚಿದ್ದೆ; ಸುಶೀಲ ಇವಳ ಹಾಗೆ ಇರಬಾರದಾಗಿತ್ತೆ ಎಂದುಕೊಂಡಿದ್ದೆ; 'ಯು, ಲಕಿ ಮ್ಯಾನ್' (you lucky man) ಎಂದು ಗೋಪಿಯನ್ನು ಕುಚೋದ್ಯ ಮಾಡಿಯೂ ಇದ್ದೆ. ಹೀಗಿರುವಾಗ, ರೋಗಿಯಾಗಿದ್ದ ಗೋಪಿ ಅವಳ ಶುಶ್ರೂಷೆಯಿಂದ ತೃಪ್ತನಾಗಿ, ದೊಡ್ಡ ಡಾಕ್ಟರಲ್ಲಿ ಬೇಡಿ, ತನ್ನ (ಸ್ಪೆಷಲ್) ವಾರ್ಡಿನಲ್ಲಿ ತಾನು ಇರುವವರೆಗೂ ಅವಳೇ ಇರಬೇಕೆಂದು ಬಯಸಿದ್ದರಲ್ಲಿ ನನಗೆ ಆಶ್ಚರ್ಯ ಕಂಡುಬರಲಿಲ್ಲ. ನಾನು ಕಣ್ಣಾರೆ ಕಂಡು ಹಾಗೆ, ಏನಾಕ್ಷಿ ಗೋಪಿಗೆ ಶುಶ್ರೂಷೆ ಮಾಡುತ್ತಿದ್ದ ಪರಿ ಅನ್ಯಾದೃಶವಾಗಿತ್ತು. ನಾನು ಕಾಯಿಲೆ ಬಿದ್ದಿದ್ದೇನೆ: (ಬೀಳತ್ತಲೇ ಇರುತ್ತೇನೆ, ಅದು ಬೇರೆಯ ಕಥೆ.) ನನ್ನ ಹೆಂಡತಿಯೂ ಕೂಡ ನನಗೆ ಹಾಗೆ ಶುಶ್ರೂಷೆ ಮಾಡಿಲ್ಲ. ಇಷ್ಟು ಹೇಳಿದ ಮೇಲೆ ಅದನ್ನು ವಿವರಿಸಬೇಕಾದದ್ದೇನೂ ಇಲ್ಲ. ಗೊಪಿ ಏನಾಕ್ಷಿಗೆ ಈ ರೀತಿ ಮರ್ಯಾದೆ ಮಾಡಬೇಕಾದದ್ದು ನ್ಯಾಯವಾಗಿಯೇ ಕಂಡಿತು. ಆದರೆ ಅವನ ಪ್ರಾಣ ಉಳಿಸಿಕೊಟ್ಟವರು ಡಾಕ್ಟರು. ಡಾಕ್ಟರನ್ನು ಬಿಟ್ಟು ಇವಳಿಗೆ

ಮರ್ಯಾದೆ ಮಾಡುವುದು ನನಗೆ ಅಷ್ಟು ಸಮಂಜಸವಾಗಿ ಕಾಣಲಿಲ್ಲ. ಗೋಪಿ ಏನಾದರೂ ತಿಳಿದುಕೊಳ್ಳಲಿ, ಏನಾಕ್ಷಿ ಹೋದ ಮೇಲೆ ಈ ವಿಷಯ ಅವನಿಗೆ ಹೇಳುವುದು ಖಂಡಿತ ಎಂದು ನಿರ್ಧರಮಾಡಿದೆ.

ಎಲ್ಲಿಂದ ಎಲ್ಲಿಗೋ ಬಂದೆ. ಇರಲಿ.

ಏನಾಕ್ಷಿ ಬಂದ ಕೂಡಲೆ ನಾನು ಏನೋ ಬೆಪ್ಪುಬೆಪ್ಪಾಗಿ ಸುಮ್ಮನೆ ನಿಂತಿದ್ದೆ. ಅವಳೇ ನನಗೆ ನಮಸ್ಕಾರ ಮಾಡಿದಳು. ಮೂವರೂ ಮೇಜಿನ ಬಳಿ ಕುಳಿತೆವು. ಏನಾಕ್ಷಿ ಗೋಪಿಯ ಸತ್ಕಾರಕ್ಕಾಗಿ ಬಹಳ ಉಪಚಾರದ ಮಾತು ಹೇಳಿದಳು. ಆ ಮಾತು ಈ ಮಾತು ಆಡುತ್ತ ತಿಂಡಿ ತೀರ್ಥ ಮುಗಿಯುತ್ತ ಬಂತು.

'ಮಿಸ್ಟರ್ ಸೀತಾಪತಿ, ನಿಮ್ಮ ಫ್ರೆಂಡನ್ನ ಇನ್ನು ಕೆಲವು ಕಾಲ ನೀವು ಹುಷಾರಾಗಿ ನೋಡಿಕೊಳ್ಳಬೇಕು. ಅಪಥ್ಯ, ರಾತ್ರಿ ನಿದ್ದೆಕೆಟ್ಟು ಓದುವುದು, ಇದೆಲ್ಲ ಮಾಡಿದರೆ ಮತ್ತೆ ಮರುಕಳಿಸಿಕೊಳ್ಳುತ್ತೆ. ನಿಮ್ಮ ಸ್ನೇಹದ ಪ್ರಭಾವದಿಂದ ಅವರಿಗೆ ವಾಸಿಯಾಗಿದೆ' ಎಂದಳು ಏನಾಕ್ಷಿ.

'ನಿಮ್ಮ ಆದರದ ಆರೈಕೆಯ ಫಲ' ಎಂದೆ ನಾನು.

'ಥ್ಯಾಂಕ್ಸ್. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಡಾಕ್ಟರ್ ಸಾಹೇಬರ ಔಷಧಿಯ ಗುಣ. ಗೋಪಾಲರಾಯರ ಪುಣ್ಯ ಅಷ್ಟೆ. ನನ್ನದೇನಿದೆ. ಅವರು ನನ್ನನ್ನು ಹೀಗೆ ಮರ್ಯಾದೆಮಾಡುತ್ತಿರುವುದು ನನ್ನ ಪುಣ್ಯ.'

ಗೋಪಿ ಹೆಚ್ಚಾಗಿ ಏನೂ ಮಾತಾಡಲಿಲ್ಲ. ತಿಂಡಿತೀರ್ಥವೆಲ್ಲ ಮುಗಿಯಿತು. ಗೋಪಿ ನನಗೆ ಸನ್ನೆ ಮಾಡಿದ. ನಾನು ರೂಮಿನಿಂದ ಸೀರೆಗಳನ್ನು ತಂದೆ. ಗೋಪಿ ಅವುಗಳನ್ನು ಕೈಲಿ ತೆಗೆದುಕೊಂಡು,—

'ಏನಾಕ್ಷಿ, ಈ ಸೀರೆಗಳು ಚೆನ್ನಾಗಿವೆಯೆ?' ಎಂದು ಕೇಳಿದ.

'ಬಲು ಸೊಗಸಾಗಿವೆ. ಎಲ್ಲಿ ತೆಗೆದಿರಿ?'

'ಹಾಗಾದರೆ ನಿಮಗೆ ಒಪ್ಪಿಗೆಯೋ?'

'ನನಗೇನೋ ಸಂಪೂರ್ಣ ಒಪ್ಪಿಗೆ. ಆದರೆ ಅದನ್ನು ಯಾರಿಗೆ ತಂದಿದ್ದೀರೋ ಅವರು ಒಪ್ಪಿದ್ದಾರೆಯೋ ಹೇಗೆ?'

'ಒಪ್ಪಿದ್ದಾರೆ. ಬಲು ಸೊಗಸಾಗಿದೆ ಎಂದಿದ್ದಾರೆ. ಅವರಿಗೆ ಮೆಚ್ಚಾಗಿ ಕೊಡಬಹುದು ತಾನೆ?'

'ಅಗತ್ಯವಾಗಿ. ಆದರೆ....' ಎನ್ನುವಷ್ಟರಲ್ಲಿ ಗೋಪಿ ಸೀರೆಗಳನ್ನು ಅವಳ ಮುಂದೆ ನೀಡಿ—

'ಹಾಗಾದರೆ ನನ್ನ ಉಡುಗೊರೆ ಸ್ವೀಕರಿಸಬೇಕು' ಎಂದ.

'ಏನು, ನನಗೇ!' ಎಂದು ಏನಾಕ್ಷಿ ಆಶ್ಚರ್ಯದಿಂದ ಕೇಳಿದಳು. ಅವಳು ಅವನ್ನು ತೆಗೆದುಕೊಳ್ಳಲು ಒಪ್ಪಲಿಲ್ಲ; ಆದರೆ ಗೋಪಿ ಬಿಡಲಿಲ್ಲ. ಏನಾಕ್ಷಿ ಬಹಳ ಸಂಕೋಚದಿಂದ ಸೀರೆಗಳನ್ನು ತೆಗೆದುಕೊಂಡಳು.

ಐದು ಘಂಟೆಯಾಯಿತು. 'ಹೊತ್ತಾಯಿತು' ಎಂದು ಏನಾಕ್ಷಿ ಹೇಳಿದಳು. 'ಮನಸ್ಸಿಗೆ ಏನೂ ತಿಳಿದುಕೊಳ್ಳದಿದ್ದರೆ..' ಎಂದು ಗೋಪಿ ನನ್ನ ಕಡೆಗೆ ತಿರುಗಿದ. 'ಏನೂ? ಸಂಕೋಚವೇಕೆ?' ಎಂದೆ. 'ಒಂದು ಟಾಂಗ....' ಎಂದು ಸೂಚಿಸಿದ.

ಟಾಂಗ ಕರೆದುಕೊಂಡು ಬಂದೆ; ಏನಾಕ್ಷಿ ಗಾಡಿಹತ್ತಿ ಹೊರಟು ಹೋದಳು. ನಾವಿಬ್ಬರೂ ಅವಳನ್ನು ಬೀಳ್ಕೊಂಡು ಮನೆಯೊಳಕ್ಕೆ ಬಂದೆವು.

ಗೋಪಿ ಹೋಗಿ ಹಾಸಿಗೆಯ ಮೇಲೆ ಬಹಳ ಆಯಾಸಗೊಂಡವನಂತೆ ಉರುಳಿಕೊಂಡ. ನಾನು ಹೋಗಿ ಅವನ ಬಳಿ ಕುಳಿತುಕೊಂಡೆ. ಅವನ ಮುಖದಲ್ಲಿ ಏನೋ ಒಂದು ಬಗೆಯ ಅತೃಪ್ತಿ, ಅಸಮಾಧಾನ, ವ್ಯಾಕುಲ ಇದ್ದಂತೆ ತೋರಿತು.

'ಗೋಪಿ, ನಿನಗೆ ಬಹಳ ಆಯಾಸವಾಗಿರುವಂತಿದೆ. ಸ್ವಲ್ಪ ನಿದ್ದೆ ಹೋಗು. ನಾನು ಬರುತ್ತೇನೆ' ಎಂದೆ.

'ಆಯಾಸವೂ ಇಲ್ಲ, ಏನೂ ಇಲ್ಲ. ದುಡಿದವನು ನೀನು. ನಿನಗೆ ಆಯಾಸವಾಗಿದೆ. ಸ್ವಲ್ಪ ಹೊತ್ತು ಸುದಾರಿಸಿಕೋ. ಇರಲಿ. ಬಾಯಾರುತ್ತೆ, ಕಾಫಿ ಮಿಕ್ಕಿದ್ದರೆ ಸ್ವಲ್ಪ ಕೊಡು' ಎಂದು ಕೇಳಿದ. ಎಷ್ಟು ಬೇಡವೆಂದರೂ ಕೇಳಲಿಲ್ಲ. ಸ್ವಲ್ಪ ಕಾಫಿ ಕೊಟ್ಟೆ. ಕುಡಿದು, ಚೇತರಿಸಿಕೊಂಡವನಂತೆ ನೀಳವಾಗಿ ಉಸಿರೆಳೆದುಕೊಂಡು, 'ಸೀತು' ಎಂದ.

'ಏನೂ?'

'ದೊಡ್ಡ ಅಪರಾಧಮಾಡಿದ್ದೇನೆ. ನೀನು ಕ್ಷಮಿಸಬೇಕು.'

'ಅಂಥಾದ್ದೇನು? ಗಾಡಿ ಮಾಡಿಕೊಂಡು ಬಂದ ವಿಷಯ ತಾನೆ? ಮಾಡಿಕೊಂಡು ಬರಕೂಡದೆ? ನೀನು ಸ್ವಸ್ಥವಾಗಿದ್ದರೆ ನನಗೆ ಹೇಳು

ತ್ತಿದ್ದೆಯಾ? ನೀನು ಹೀಗೆಲ್ಲ ಮನಸ್ಸಿಗೆ ಕಿರಿಕಿರಿಮಾಡಿಕೊಳ್ಳಬೇಡ' ಎಂದು ಸಮಾಧಾನಪಡಿಸಿದೆ.

'ಸೀತು, ಅಪರಾಧಮಾಡಿದ್ದೇನೆ. ಏನು ಎನ್ನುವುದು ಹೇಳುತ್ತೇನೆ. ನಾನು ಖಾಯಿಲೆ ಬಿದ್ದಂದಿನಿಂದ ನಡೆದ ಕೆಲವು ಸಂಗತಿಗಳನ್ನು ನಿನ್ನಲ್ಲಿ ಹೇಳದೆ ಬಚ್ಚಿಟ್ಟುಕೊಂಡದ್ದು ಒಂದು ಅಪರಾಧ. ನಾನು ಏನಾಕ್ಷಿ ಯೊಬ್ಬಳೊಡನೆಯೇ ಇರಬೇಕು ಎನ್ನಿಸಿತು. ನಿನ್ನನ್ನು ಹೇಗೆ ಹೊರಕ್ಕೆ ಹೋಗು ಎನ್ನಲಿ? ಯೋಚಿಸಿ ಯೋಚಿಸಿ ಗಾಡಿ ಮಾಡಿಕೊಂಡು ಬರು ವುದಕ್ಕೆ ಕಳಿಸಿದೆ. ಮನಬಿಚ್ಚಿ ಹೇಳಿದ್ದೇನೆ. 'ಪ್ಲೀಜ್ ಎಕ್ಸ್‌ಕ್ಯೂಜ್' ದಯ ಮಾಡಿ ಕ್ಷಮಿಸು.'

ನನಗೆ ವಿಷಯ ಕೊಂಚ ಕೊಂಚ ಹೊಳೆಯತೊಡಗಿತು. ಹಾಸ್ಯ ಮಾಡಬೇಕೆಂದು ಯೋಚನೆ ಬಂತು. ಆದರೆ ಅವನ ಮುಖದ ವ್ಯಾಕುಲ, ಚಿಂತೆ ನೋಡಿ ಹಾಸ್ಯಕ್ಕೆ ವೇಳೆಯಲ್ಲವೆಂದರಿತು, ಸುಮ್ಮನಿದ್ದೆ. ಗೋಪಿ ಹೇಳಿದ:

'ಸೀತು, ನಿನಗೆ ಸ್ವಲ್ಪ ಬೇಸರವಾಗುತ್ತೆ. ನಿನಗೆ ಎಲ್ಲವನ್ನೂ ಹೇಳಬೇಕಾಗಿ ಬಂದಿದೆ. ಇನ್ನು ಬಚ್ಚಿಟ್ಟುಕೊಳ್ಳಲು ಸಾಧ್ಯವಿಲ್ಲ. ಹೇಳಿ ಬಿಡುತ್ತೇನೆ.'

ನಾನು ಕುತೂಹಲದಿಂದ ಸುಮ್ಮನಿದ್ದೆ.

ಗೋಪಿ ಹೇಳತೊಡಗಿದ:—

'ಸೀತು, ಏನಾಕ್ಷಿಯನ್ನು ನಾನು ಪ್ರೀತಿಸುತ್ತೇನೆ. ಅದು ಮೊದ ಲಾದದ್ದು ಆಸ್ಪತ್ರೆಯಲ್ಲಿ. ನಾನು ಜನರಲ್ ವಾರ್ಡಿನಲ್ಲಿದ್ದಾಗ ಎಲ್ಲ ರೋಗಿ ಗಳನ್ನು ನೋಡಿಕೊಳ್ಳುವುದಕ್ಕಿಂತ ಹೆಚ್ಚು ಆದರದಿಂದ, ವಿಶ್ವಾಸದಿಂದ, ನನ್ನನ್ನು ನೋಡಿಕೊಳ್ಳುತ್ತಿದ್ದಳು. ನನಗೆ ಆಶ್ಚರ್ಯವಾಯಿತು. ಹೊತ್ತಿಗೆ ಗೊತ್ತಿಗೆ ಔಷಧಿ ಆಹಾರ ಕೊಡುತ್ತಿದ್ದಳು. ಡಾಕ್ಟರು ಹೇಳಿದ್ದಕ್ಕಿಂತ ಹೆಚ್ಚು ಸಲ ಬಂದು ನೋಡಿಕೊಂಡು ಹೋಗುತ್ತಿದ್ದಳು. ನನ್ನ ಹೆಂಡತಿ, ಹುಡುಗಿ, ನನ್ನೊಡನೆ ಸಂಸಾರಮಾಡುವುದಕ್ಕಿಂತ ಮುಂಚೆ ತೀರಿಹೋದಂದಿ ನಿಂದ ನಾನು ಯಾರನ್ನೂ ಏನಾಕ್ಷಿಯನ್ನು ನೋಡಿದ ಒಲವಿನ ದೃಷ್ಟಿ ಯಿಂದ ನೋಡಿರಲಿಲ್ಲ. ಏನಾಕ್ಷಿಯನ್ನು ಏಕೆ ಒಲಿದೆನೋ ತಿಳಿಯದು.

ಅವಳ ಚೆಲುವೋ ಅವಳ ಉಪಚಾರವೋ, ಅಥವಾ ಎರಡೂ ಸೇರಿಯೋ ನನ್ನನ್ನು ಅವಳ ಕಡೆಗೆ ಸೆಳೆಯಿತು. ಎಲ್ಲರ ಎದುರಿನಲ್ಲಿ ಈ ವಿಚಾರ ನಾನು ಹೇಗೆ ಅವಳೊಡನೆ ಮಾತಾಡಲಿ ? ಒಮ್ಮೆ ನನ್ನ ಖಾಯಿಲೆ ಸ್ವಲ್ಪ ಸಮಾಧಾನ ಸ್ಥಿತಿಗೆ ಬಂದಿದ್ದಾಗ, ಆಸ್ಪತ್ರೆಯ ತೋಟದ ಹುಲ್ಲುಹಾಸಿನ ಮೇಲೆ ಪತ್ರಿಕೆ ಓದುತ್ತ ಕುಳಿತಿದ್ದೆ. ಏನಾಕ್ಷಿ ಶುಭ್ರವಾದ ಬಿಳಿ ಸೀರೆಯುಟ್ಟು, ಹೆರಳಿನ ತುರುಬು ಹಾಕಿಕೊಂಡು, ಗುಲಾಬಿ ಹೂ ಮುಡಿದು, ನನ್ನ ಮುಂದೆ ಹಂಸೆಯಂತೆ ತೇಲಿಹೋಗುತ್ತಿದ್ದಳು. 'ಏನಾಕ್ಷಿ' ಎಂದು ಮೆಲುದನಿಯಲ್ಲಿ ಕೂಗಿದೆ. ತಿರುಗಿ ನೋಡಿದಳು; ನನ್ನ ನೋಡಿ ಹತ್ತಿರ ಬಂದು ನಿಂತಳು.

'ನರ್ಸ್, ನರ್ಸ್ ಎಂದು ಇದುವರೆಗೂ ಕರೆಯುತ್ತಿದ್ದೆ. ಏನಾಕ್ಷಿ ಎಂದರೆ ಅಸಮಾಧಾನವಿಲ್ಲ ತಾನೆ ?' ಎಂದು ಕೇಳಿದೆ. 'ಅಸಮಾಧಾನ ವೇಕೆ ?' ಎಂದು ನಕ್ಕಳು. ಕೆಲಸವಿಲ್ಲದಿದ್ದರೆ ನನ್ನ ಬಳಿ ತುಸಹೊತ್ತು ಮಾತಾಡಿ ಹೋದರೆ ನನಗೆ ಸಂತೋಷವಾಗುವುದೆಂದೆ. ಪಕ್ಕದಲ್ಲಿ ಬಂದು ಕುಳಿತುಕೊಂಡಳು. ಆಗ ನನ್ನ ಹೃದಯದಲ್ಲಿ ಅವಳ ಮೇಲಿನ ಪ್ರೇಮ ತುಂಬಿತ್ತು. ಕುರುಡುಪ್ರೇಮ !

'ನನ್ನ ಹೆಂಡತಿ ಹೋದದ್ದು, ಒಬ್ಬೊಂಟಿಗನಾಗಿ ಬೇಸರದ ಜೀವನ ನೂಕುತ್ತಿರುವುದು, ಬಾಳಿನಲ್ಲಿ ಬೆಳಕು ಇಲ್ಲದಿರುವುದು—ಎಲ್ಲ ವಿವರಿಸಿದೆ. ಸಾವಧಾನದಿಂದ ಆಲಿಸಿ ಮರುಕಪಟ್ಟಳು.

'ಧೈರ್ಯಮಾಡಿ ಅವಳ ವಿಚಾರ ಕೇಳಿದೆ. ನೀನು ನಂಬುತ್ತಿಯೋ ಇಲ್ಲವೋ,' ಅವಳು ತನ್ನ ವಿಚಾರ ಕೊಂಚ ಹೇಳಿದಳು :

'ಮಿಸ್ಟರ್ ಗೋಪಾಲ್, ನನ್ನ ವಿಚಾರ ಇದುವರೆಗೆ ಯಾವ ರೋಗಿಯೂ ಹೀಗೆ ಕೇಳಿರಲಿಲ್ಲ. ನೀವು ನನ್ನಲ್ಲಿ ಅಂತಃಕರಣವಿಟ್ಟು ನಿಮ್ಮ ವಿಷಯ ಇಷ್ಟು ಹೇಳಿ ನನ್ನ ವಿಷಯ ಕೊಂಚವಾದರೂ ಹೇಳದೆ ಹೋದರೆ ನನ್ನ ಮನಸ್ಸೇ ಒಪ್ಪುವುದಿಲ್ಲ. ನಾನೂ ನಿಮ್ಮ ಹಾಗೆ ಒಬ್ಬೊಂಟಿಗತ್ತಿ.'

'ನನ್ನ ಹಾಗೇ ಒಬ್ಬೊಂಟಿಗಿತ್ತಿಯೆ ? ಎಂದರೆ....' ಎಂದು ಆಸು ಮಾಸಿಸಿದೆ.

'ಹೌದು. ನಿಮ್ಮ ಹಾಗೆಯೇ ನನಗೂ ಚಿಕ್ಕವಯಸ್ಸಿನಲ್ಲಿಯೇ ಮದುವೆಯಾಯಿತು' ಎಂದು ತನ್ನ ದುಃಖದ ಕತೆ ಹೇಳಿಕೊಂಡಳು.

'ನೀತು, ಅವಳ ಕತೆ ಕೇಳಿ ನನಗೆ ಜುಗುಪ್ಸೆಯಾಗಲಿಲ್ಲ, ಪ್ರೇಮ ಇನ್ನೂ ಹೆಚ್ಚಿತು. ಅವಳ ಗಂಡ ಹೋದಾಗ ತಾಯಿತಂದೆಯಿಲ್ಲದ ಅವಳನ್ನು, ಯೌವನ ತುಂಬಿದ ತರುಣಿಯನ್ನು, ಸಂಸಾರದ ಸವಿ ಕಾಣದ ಮುಗ್ಧೆಯನ್ನು, ತವರುಮನೆಯ ಸೋದರರು,ಮಾವನ ಮನೆಯ ಭಾವಮೈದುನರು ಕೈಬಿಟ್ಟು ತೊರೆದರು. ಅವಳು ಏನು ಮಾಡುತ್ತಾಳೆ? ಎಲ್ಲಿ ಹೋದಾಳು? ಹಳ್ಳಿಗಾಡಿನ ಕೆಲವು ಪುಂಡರಿಗೆ ಹೆದರಿದಳು. ಪಟ್ಟಣವಾಸದಲ್ಲಿ ಕೂಲಿಯಾದರೂ ಮಾಡಿ ಹೊಟ್ಟೆಹೊರೆಯುತ್ತೇನೆಂದು ಇಲ್ಲಿಗೆ ಬಂದಳು. ಯಾವ ವಿಷಘಳಿಗೆಯಲ್ಲಿ ಸತ್-ಪ್ರೇರಣೆ ಮಾಯವಾಗಿ ಕತ್ತಲು ಕವಿಯಿತೋ, ಕೆಸರಿಗೆ ಕಾಲಿಟ್ಟಳು. ತನ್ನ ರೂಪಸಂಪತ್ತನ್ನು ಮಾರತೊಡಗಿದಳು. ಪಾಪದ ಫಲವಾಗಿ ಮಗು ಹೆತ್ತಳು. ಆಸ್ಪತ್ರೆಯಲ್ಲಿ ನರಳಿದಳು, ಮರುಗಿದಳು, ಕೊರಗಿದಳು. ಮಗು ತೀರಿಹೋಯಿತು. ತನ್ನ ಬಾಳನ್ನು ನೇರ್ಪಡಿಸಿಕೊಳ್ಳಲು ಶಪಥಮಾಡಿದಳು. ಆದರೆ ತಾನು ಮಾನವಾಗಿ ಬದುಕಬೇಕು. ಆಸ್ಪತ್ರೆಯ ಅಧಿಕಾರಿಗಳಿಗೆ ತನ್ನ ಚರಿತ್ರೆ ಹೇಳಿದಳು. ಅವರು ಕರುಣೆ ತೋರಿದರು. ಆಸ್ಪತ್ರೆಯಲ್ಲಿ ನರ್ಸಾಗಿ ಸೇರಿದಳು. ಕಾಲಕ್ರಮದಲ್ಲಿ ಬುದ್ಧಿವಂತೆಯಾದ ನರ್ಸಾದಳು, ಎಲ್ಲರಿಗೂ ಬೇಕಾದವಳಾದಳು; ದುಡ್ಡು ಕೂಡುತ್ತ ಬಂತು; ಮನೆಯಲ್ಲಿ ಸಂಗೀತ, ವಿದ್ಯೆ, ಕಲೆ ಎಲ್ಲವನ್ನೂ ಕಲಿತಳು; ವಿದ್ಯಾವತಿಯಾದಳು, ಸುಸಂಸ್ಕೃತಳಾದಳು. ತನ್ನ ಹಿಂದಿನ ಬಾಳನ್ನು ಮರೆತಳು; ಹೊಸ ಬಾಳನ್ನು ಬದುಕತೊಡಗಿದಳು. ಪಾಪಪಂಕದಲ್ಲಿ ಕೆಲವು ಕಾಲ ಮುಳುಗಿದ್ದರೂ ಕಮಲದಂತೆ ಮೇಲೆದ್ದಳು. ಜನರ ಸೇವೆಗೆ, ರೋಗಿಗಳ ಸೇವೆಗೆ, ಸ್ವಾರ್ಥರಹಿತವಾದ ಸೇವೆಗೆ ತನ್ನ ಜೀವನವನ್ನು ಮುಡಿಪಾಗಿ ಇಡುವುದಾಗಿ ಪ್ರತಿಜ್ಞೆಮಾಡಿದಳು.

'ಆ ದಿನ ಇಷ್ಟು ತಿಳಿದುಬಂದ ಮೇಲೆ, ರೋಗಿಗಳ ಸೇವೆಗೆ ನಿನ್ನ ಬಾಳು ಮುಡಿಪಾಗಿದೆ. ಗೊತ್ತು ಗುರಿಯಿಲ್ಲದ ದುಡಿತಕ್ಕೆ ನನ್ನ ಬಾಳು ಮುಡಿಪಾಗಿದೆ. ರೋಗಿಗಳು ಬರುತ್ತಾರೆ, ರೋಗಿಗಳು ಹೋಗುತ್ತಾರೆ. ನಾನು ಆಸ್ಪತ್ರೆ ಬಿಟ್ಟ ಮೇಲೆ ಮರೆತು ಬಿಡುತ್ತೀರೋ ಏನೋ? ನಾನಂತೂ ನಿಮ್ಮನ್ನು ಸ್ವಲ್ಪವೂ ಮರೆಯಲಾರೆ' ಎಂದೆ.

'ನೀವು ಮೊದಲು ಬೇಗ ಆಸ್ಪತ್ರೆ ಬಿಡುವಂತಾಗಲಿ. ನಿಮ್ಮನ್ನು ಮರೆಯುವುದು ಇಲ್ಲದಿರುವುದು ಆ ಮೇಲಿನ ಪ್ರಶ್ನೆ ' ಎಂದು ಹೊರಟು ಹೋದಳು.

' ಇದ್ದಕ್ಕಿದ್ದ ಹಾಗೆ ನನ್ನ ರೋಗ ಮತ್ತೆ ಪ್ರಬಲವಾಯಿತು. ರೋಗ ಎಂಥ ಸ್ಥಿತಿಗೆ ಬಂತೆಂಬುದು ನಿನಗೇ ಗೊತ್ತಿದೆ. ಗಲಾಟೆಯಾಗದು, ಎಂದು ನನ್ನನ್ನೆ ಸ್ಪೆಷಲ್ ವಾರ್ಡ್ ಕೊಠಡಿಗೆ ಹಾಕಿದರು. ಮೊದಲು ಇಬ್ಬರು ಇದ್ದ ಕೊಠಡಿಗೆ ನನ್ನನ್ನು ಹಾಕಿದ್ದರು. ಏನಾಕ್ಷಿಯೇ ಡಾಕ್ಟರುಗಳಿಗೆ ಹೇಳಿ ನನ್ನನ್ನು ಪ್ರತ್ಯೇಕ ಕೊಠಡಿಗೆ ಹಾಕಿಸಿದಳು. ನಾನು ಒಬ್ಬೊಂಟಿಗ ನೆಂಬ ಸಂಗತಿ ಅವರಿಗೆ ತಿಳಿಸಿ, ನನಗೆ ವಾಸಿಯಾಗುವವರೆಗೆ ನನ್ನ ' ಕೇಸ್ ' ಒಂದನ್ನೇ ನೋಡಿಕೊಳ್ಳಲು ಅಪ್ಪಣೆ ಪಡೆದು ನನ್ನ ಬಳಿಯೇ ಇರುತ್ತಿದ್ದಳು. ಸೀತು, ಅವಳ ಆರೈಕೆಯನ್ನು ಈಗ ನೆನಸಿಕೊಂಡರೆ—ನನಗೆ ಹೇಳುವುದಕ್ಕೆ ಮಾತು ಬರದು, ಸೀತು. ನಾನು ಅನುಭವಿಸುತ್ತಿದ್ದ ನರಕಯಾತನೆಯಲ್ಲೂ ಅವಳ ದರ್ಶನ, ಅವಳ ಸಾನ್ನಿಧ್ಯ ನನಗೆ ಸ್ವರ್ಗಸಮನಾಗಿದ್ದುವು.

' ಒಂದು ದಿನ, ಉದ್ವೇಗ ತಡೆಯಲಾರದೆ ಅವಳಿಗೆ ಹೀಗೆ ಹೇಳಿದೆ : ಅಷ್ಟು ಹೊತ್ತಿಗೆ ಅವಳನ್ನು ಏಕವಚನದಲ್ಲಿ ಮಾತಾಡಿಸುವ ಸಲಿಗೆ ವಹಿಸಿ ಬಿಟ್ಟಿದ್ದೆ.

'ಏನಾಕ್ಷಿ, ಇನ್ನು ನಾನು ಬದುಕುವುದಿಲ್ಲ. ಮುಂದಿನ ವಾರ ಆಪರೇಶನ್; ಈಗಾಗಲೇ ಎಷ್ಟೋ ಇಂಜೆಕ್ಷನ್‌ಗಳಾಗಿಬಿಟ್ಟವೆ. ಆಯುಸ್ಸು ಇದ್ದರೆ ಬದುಕುವೆ ಎಂದು ನೀನು ಹೇಳುತ್ತಿ. ಆಯುಸ್ಸಿನ ಕತೆಯಲ್ಲಿ ನನಗೆ ನಂಬಿಕೆ ಯಿಲ್ಲ. ನಾನು ಬದುಕಬೇಕು, ಯಾವುದೋ ಒಂದು ವ್ಯಕ್ತಿಗಾಗಿ ಬದುಕ ಬೇಕು, ಯಾವುದೋ ಒಂದು ಆದರ್ಶಕ್ಕಾಗಿ ಬದುಕಬೇಕು—ಎಂಬ ಪ್ರಬಲ ವಾದ ಆಸೆ ಹೃದಯದಲ್ಲಿದ್ದರೆ ಆ ಆಸೆ ಬದುಕಿರಲು ಚೇತನ ಕೊಡುತ್ತದೆ; ರೋಗವನ್ನು ಹೊಡೆದೋಡಿಸುತ್ತದೆ. ನಾನು ಬದುಕಬೇಕು ಎಂಬ ಆಸೆ ನಿನಗೆ ಇಲ್ಲವೆ ? ( ' ಖಂಡಿತ ಇದೆ ' ಎಂದಳು. ) ನಾನು ಬದುಕಬೇಕು ಎಂಬ ಆಸೆ ನಿನಗಿರಬಹುದು, ನನಗಿಲ್ಲ. ನಾನು ಯಾರಿಗಾಗಿ ಬದುಕಿರಲಿ ? ನನಗೆ ಆದರ್ಶವಿಲ್ಲ, ನನ್ನದಾದ ವ್ಯಕ್ತಿಯೊಂದಿಲ್ಲ. ಏನಾಕ್ಷಿ— ಆ ಆಸೆ ಯನ್ನು ನೀನು ನನಗೆ ಕೊಡಬೇಕು. ಆಗ ನಾನು ಬದುಕುತ್ತೇನೆ. ಏನಾಕ್ಷಿ

ನನಗೆ ಹುಚ್ಚು ಎಂದು ತಿಳಿಯಬೇಡ, ರೋಗದ ಭ್ರಮಣೆ ಎಂದು ತಿಳಿಯ ಬೇಡ. ನಾನು ನಿನ್ನನ್ನು ಮನಸಾರೆ ಪ್ರೀತಿಸುತ್ತೇನೆ. ನನ್ನನ್ನೂ ನೀನು ಪ್ರೀತಿಸುತ್ತೀಯಾ?. . . . ಇಲ್ಲವೇನು? ಹಾಗಾದರೆ ನಾನು ಬದುಕುವುದಿಲ್ಲ. ಆದರೆ, ಸಾಯುವವರೆಗೂ ನಿನ್ನನ್ನು ನಾನು ಪ್ರೀತಿಸುತ್ತಿರುತ್ತೇನೆ. ಇನ್ನು ಹೋಗು. ನನಗೆ ನಿದ್ದೆ ಬರುತ್ತೆ. ಮಲಗಬೇಕು ' ಎಂದೆ.

' ನನಗೆ ಅನಿರೀಕ್ಷಿತವಾದ ಉತ್ತರ ಬಂತು: ' ಗೋಪಾಲ್, ನಿನ್ನನ್ನು ನಾನು ಪ್ರೀತಿಸುತ್ತೇನೆ. ಇಂದಿನಿಂದ ಪ್ರೀತಿಸುತ್ತೇನೆ. ನೀನು ನನ್ನ ಹಿಂದಿನ ಹೀನವಾದ ಬಾಳಿಗೆ ಕಾರಣವಾದ ನನ್ನ ದೇಹರೂಪಗಳನ್ನು ಗಮನಿಸದೆ, ಮರೆತು, ಇಂದಿನ ನನ್ನ ತಿಳಿಯಾದ ಹೃದಯವನ್ನು ಮಾತ್ರ ಪ್ರೀತಿಸುವು ಹಾದರೆ ನಾನು ನಿನ್ನನ್ನು ಪ್ರೀತಿಸುತ್ತೇನೆ. '

' ಖಂಡಿತವಾಗಿಯೂ ' ಎಂದೆ, ಆಶ್ಚರ್ಯದಿಂದ.

' ಖಂಡಿತವಾಗಿಯೂ ' ಎಂದು ನನ್ನ ಹಣೆಯ ಮೇಲೆ ಒಂದು ಹೂಮುತ್ತು ಒತ್ತಿದಳು. ನಾನು ಅವಳ ಎರಡು ಕೈಗಳನ್ನೂ ಹಿಡಿದು ಕೊಂಡೆ. ಸುಮ್ಮನಿದ್ದಳು.

' ಆಪರೇಷನ್ನೂ ಆಯಿತು. ಏನೂ ಅಪಾಯ ಸಂಭವಿಸದೆ ಗುಣ ಮುಖವಾಯಿತು.

' ಹೀಗೆ ನನ್ನನ್ನು ಬದುಕಿಸಿದ್ದ, ನನ್ನವಳೇ ಆಗಿದ್ದ ಏನಾಕ್ಷಿಗೆ ಎರಡು ಸೀರೆ ತಂದದ್ದು ಹೆಚ್ಚು ಎಂದು ನಾನು ತಿಳಿಯಲಿಲ್ಲ.

' ಸರಿ, ಆದರೆ ಇನ್ನು ಅವಳ ಆಸೆ ನಾನು ಬಿಡಬೇಕಾಗಿದೆ. ಈ ದಿನ ತನ್ನ ಮೃದುಮಾತಿನಿಂದ ನನ್ನ ಹೃದಯದಲ್ಲಿ ಶಲ್ಯವನ್ನೇ ನೆಟ್ಟು ಹೋಗಿದ್ದಾಳೆ '

' ಏನೂ? ' ಎಂದು ಕುತೂಹಲದಿಂದ ನಡುವೆ ಪ್ರಶ್ನಿಸಿದೆ.

' ನೀನು ಹೊರಕ್ಕೆ ಹೋಗಿದ್ದಾಗ ಅವಳನ್ನು ಕೇಳಿದೆ: ' ನಿನ್ನ ಹಿಂದಿನ ಬಾಳು ಕಟ್ಟಿಕೊಂಡು ನನಗೇನು? ನಿನ್ನ ಜಾತಿ ಯಾವುದಾದರೇನು, ನನ್ನ ಕುಲ ಯಾವುದಾದರೇನು? ನೀನು ಬಾಳಿನಲ್ಲಿ ನೊಂದವಳು, ನಾನೂ ನೊಂದ ವನು. ನಾನು ಗೆಳತಿಯಿಲ್ಲದ ಒಬ್ಬೊಂಟಿಗ; ನೀನೂ ಗೆಳೆಯನಿಲ್ಲದ ಒಂಟಿ ಗಿತ್ತಿ. ನನ್ನ ಪ್ರೀತಿಯಲ್ಲಿ ನಿನಗೆ ನಂಬಿಕೆಯಿದ್ದರೆ ಏಕೆ ನನ್ನ ಜೊತೆಗಾತಿ ಯಾಗಿ ಬದುಕಬಾರದು? ' ಎಂದು ಕೇಳಿದೆ.

'ಗೋಪಾಲ್, ನಿಮ್ಮನ್ನು ನಾನು ಎಂದೆಂದೂ ಪ್ರೀತಿಸುತ್ತಿರುತ್ತೇನೆ. ನಾನು ಯಾರನ್ನು ಪ್ರೀತಿಸುವುದಿಲ್ಲ? ಎಲ್ಲರನ್ನೂ ಪ್ರೀತಿಸುತ್ತೇನೆ. ಆದರೆ ಯಾರೂ ನಿಮ್ಮಂತೆ ನನ್ನ ಕೂಡ ಈ ಬಗೆಯ ಪ್ರೇಮವನ್ನು ಕೇಳಲಿಲ್ಲ. ನಿಮ್ಮನ್ನು ಪ್ರೀತಿಸುವುದಕ್ಕೆ ನಿಮ್ಮ ಜೊತೆಯೇ ಇರಬೇಕೆ? ಹಾಗೆಯೇ ಪ್ರೀತಿಸುವುದಕ್ಕಾಗುವುದಿಲ್ಲವೆ? ನಾನು ಎಂದೊಂದೂ ನಿಮ್ಮನ್ನು ಪ್ರೀತಿಸುತ್ತಿರುತ್ತೇನೆ. ಆದರೆ ನೀವು ಕೇಳುವಷ್ಟನ್ನು ನಡಸಿಕೊಡಲಾರೆ. ನನ್ನ ಬಾಳನ್ನು ಸಂಪೂರ್ಣವಾಗಿ ಸೇವೆಗೆ ಮೀಸಲಾಗಿಟ್ಟಿದ್ದೇನೆ. ಮತ್ತೆ ಸಂಸಾರ ಸಾಗರಕ್ಕೆ ಕಾಲಿಡಲು ನಾನು ಅಂಜುತ್ತೇನೆ. ಕಾಲಿಟ್ಟಮೇಲೆ ತೆರೆ ಎಲ್ಲಿಗೆ ಸೆಳೆಯುವುದೋ ಹೇಗೆ ಹೇಳುವುದು? ದಯವಿಟ್ಟು ಮನ್ನಿಸಿ. ಪ್ರೀತಿಯ ಗುರುತು ಬೇಕಾದರೆ....ಪ್ರೀತಿ ತೋರಿಸಲು ಅದು ಅನಿವಾರ್ಯವಾದದ್ದಾದರೆ ..' ಎಂದು ಸುಮ್ಮನಾದಳು. ಅವಳ ಇಂಗಿತವನ್ನು ಗ್ರಹಿಸಿದರೂ ಕೂಡ ನಾನು ಸುಮ್ಮನಿದ್ದೆ. ಅವಳು ಹೊರಟುಹೋದಳು. ಅವಳ ಮಾತಿನಲ್ಲಿ ನ್ಯಾಯವಿದೆ; ಆದರೆ ನನಗೆ ಅನ್ಯಾಯಮಾಡಿದ್ದಾಳೆ—ಎಂದು ನಿಟ್ಟುಸಿರುಬಿಟ್ಟು ಸುಮ್ಮನಾದೆ.'

ಗೋಪಿಯ ಸ್ಥಿತಿಗಾಗಿ ನಾನು ಬಹು ಮರುಗಿದೆ. ಅವನ ಹೃದಯದ ನೋವು ನನಗೂ ತಾಕಿತು. ಮಾರನೆಯ ದಿನವೇ ಏನಾಕ್ಷಿಯ ಮನೆ ಹುಡುಕಿಕೊಂಡು ಹೋಗಿ, ಅವಳಿಗೆ ಬಗೆಬಗೆಯಲ್ಲಿ ಹೇಳಿದೆ. 'ನೀವು ಹೇಳುವುದೆಲ್ಲ ನ್ಯಾಯ; ಆದರೆ ಗೋಪಿಗೆ ಅನ್ಯಾಯವಾಗಿದೆ' ಎಂದೆ, ತುಸ ಕೋಪದಿಂದ.

'ನೀವು ಹೇಳುವುದೂ ನ್ಯಾಯವೇ. ಆದರೆ ನಾನು ಹೇಳುವುದನ್ನು ಸ್ವಲ್ಪ ಕೇಳಬಾರದೆ?' ಎಂದು ಹೇಳತೊಡಗಿದಳು: 'ಆಸ್ಪತ್ರೆಯಲ್ಲಿ ನಾನು ನರ್ಸಾಗಿ ಸೇರಿದಂದಿನಿಂದ ನಾನೂ ನೋಡುತ್ತಿದ್ದೇನೆ. ನನ್ನನ್ನು ಬಯಸಿದವರು ಎಷ್ಟೋ ಮಂದಿ. ಆದರೆ ರೋಗಿಗಳಲ್ಲಿ ನನ್ನನ್ನು ಈ ರೀತಿ ಮೋಹಿಸಿದವರು ನಿಮ್ಮ ಗೋಪಾಲ್ ಒಬ್ಬರೇ.'

'ನಿಮ್ಮ ಗೋಪಾಲ್ ಅಲ್ಲವೇನು? ನೀವು ಅವನಿಗೆ ಇಲ್ಲದ ನಂಬಿಕೆ ಹುಟ್ಟಿಸಿದ್ದು ಅನ್ಯಾಯ ಎಂದು ನೀವೇ ಒಪ್ಪಿಕೊಂಡ ಹಾಗಾಯಿತಲ್ಲ.'

'ನಾನು ಮಾಡಿದ್ದು ಅನ್ಯಾಯವಲ್ಲವೆಂಬುದು ನನಗೆ ಚೆನ್ನಾಗಿ

ಗೊತ್ತಿದೆ. ಔಷಧಿ ಉಪಚಾರದ ಜೊತೆಗೆ 'ನಾನು ಬದುಕಬೇಕು, ಬದುಕುತ್ತೇನೆ' ಎಂಬ ಆಸೆ, ನಂಬಿಕೆ ರೋಗಿಯಲ್ಲಿ ನೆಲೆಸಿದರೆ ಬೇಗ ಗುಣವಾಗುತ್ತದೆಂದು ನನ್ನ ಅನುಭವ, ನಂಬಿಕೆ. ನಿಮ್ಮ ಸ್ನೇಹಿತರ ವಿಷಯದಲ್ಲಿ ಇದು ಇನ್ನೂ ಸ್ಪಷ್ಟವಾಗಿ ವ್ಯಕ್ತವಾಯಿತು. ಅವರು ಗುಣಮುಖವಾಗಲು ನನ್ನ ಪ್ರೇಮ ಅವರಿಗೆ ಅವಶ್ಯವಾಯಿತು. ಅದನ್ನು ಎರೆದೆ. ಗುಣವಾಯಿತು. ನನ್ನ ಕರ್ತವ್ಯ ಮುಗಿಯಿತು.'

'ನೀವು ಪ್ರೇಮ ಎರೆಯಲಿಲ್ಲ, ನಟಿಸಿದಿರಿ; ನಟಿಸಿ ಈಗ ದ್ರೋಹ ಮಾಡಿದಿರಿ' ಎಂದು ಹೀಯಾಳಿಸಿದೆ.

'ನೀವು ಹೇಗೆ ಬೇಕಾದರೂ ಭಾವಿಸಿಕೊಳ್ಳಿ. ಮುಖ್ಯ ಗೋಪಾಲ್ ಬದುಕಿದರು. ಅಷ್ಟೇ ನನಗೆ ಪರಮಸಂತೋಷ. ನನ್ನ ಕರ್ತವ್ಯಪಾಲನೆಯಿಂದ ನನಗೂ ಸಂತೋಷವಾಗಿದೆ. ಪ್ರೇಮವನ್ನು ನಟಿಸುವುದರಿಂದ ಸತ್ಪರಿಣಾಮ ಉಂಟಾಗುವುದಾದರೆ ಎಲ್ಲರೂ ಪ್ರೇಮದ ನಟನೆ ಕಲಿಯುವುದು ಬಹಳ ಆವಶ್ಯಕ ಅಲ್ಲವೆ?'

'ನಾನಂತೂ ನಟಿಸಲಾರೆ' ಎಂದು ಬೇಸರಗೊಂಡು ಹೊರಟು ಬಂದೆ.

* * * * * *

ಒಂದು ತಿಂಗಳು ಕಳೆಯಿತು. ದಿನದಿನಕ್ಕೂ ಗೋಪಿಯನ್ನು ನಿರಾಶೆ ಆವರಿಸಿತು. ಇನ್ನೂ ತಿಂಗಳ ರಜವಿದ್ದರೂ ಗೋಪಿ ಕಚೇರಿಗೆ ಹೋಗುವುದು ಮೊದಲುಮಾಡಿದ. ರಾತ್ರಿ ನಿದ್ದೆಕೆಟ್ಟು ಸಿನಿಮಾಕ್ಕೆ ಹೋಗುವುದು, ಸಿಕ್ಕಿದ ಹಾಗೆ ಅಪಥ್ಯಮಾಡುವುದು—ಮುಂತಾಗಿ ಸ್ವೇಚ್ಛೆಯಿಂದ ಇರತೊಡಗಿದ. ಎಷ್ಟು ಹೇಳಿದರೂ ಕೇಳಲಿಲ್ಲ. ನಮ್ಮ ಮನೆಗೂ ಬರಲಿಲ್ಲ; ಬ್ರೆಡ್ಡು ಹಾಲು ಹಣ್ಣು ಬೇಸರ, ಸ್ವಂತವಾಗಿಯಾದರೂ ಒಂದಿಷ್ಟು ಅನ್ನ ಬೇಯಿಸಿಕೊಳ್ಳುವುದೂ ಆಗದು, ನಾನು ಮಾಡಕೂಡದು, ಅಡಿಗೆಯವನನ್ನು ಇಟ್ಟುಕೊಳ್ಳುವುದೂ ಬೇಕಿಲ್ಲ. ಮತ್ತೆ ಹೋಟಲಿನಲ್ಲಿ ಊಟ ತಿಂಡಿಗೆ ಪ್ರಾರಂಭಿಸಿದ.

ಅವನ ಹಿಂದಿನ ರೋಗ ಇದ್ದಕ್ಕಿದ್ದ ಹಾಗೆ ಮರುಕೊಳಿಸಿಕೊಂಡಿತು. ದಿನವಾಯ್ತು; ಎರಡು ದಿನವಾಯ್ತು; ವಾರವಾಯ್ತು; ತಿಂಗಳಿಗೆ ಬಂತು. ಆಸ್ಪತ್ರೆಗೆ ಹೋಗು ಎಂದರೂ ಕೇಳ. ಇಂಥ ಹಟವಾದಿಗಳನ್ನು ನಾನು ಕಂಡಿರಲಿಲ್ಲ, ಕಾಣುವಂತಿಲ್ಲ.

ಗೋಪಿಯು ಬಾಯಿಲಿ ಹೇಗೆಹೇಗೋ ತಿರುಗಿ ಬಿಟ್ಟಿತು. ಒಂದು ಕಡೆ ಹೊಟ್ಟೆಶೂಲೆ, ಒಂದು ಕಡೆ ಜ್ವರ. ವಿಚಿತ್ರವಾಗಿ ಕಂಡಿತು.

ದಿನಾಗಲೂ ಡಾಕ್ಟರೊಬ್ಬರು ಬಂದು ನೋಡಿಕೊಂಡು ಹೋಗುತ್ತಿದ್ದರು. ಆಸ್ಪತ್ರೆಗೆ ಹೋದರೆ ಒಳ್ಳೆಯದು ಎಂದು ಸಲಹೆ ಕೊಟ್ಟರು. ಒಂದು ದಿನ ನಾನೂ ಹೇಳಿದೆ; ವಿನಾಕ್ಷಿಯ ವಿಶ್ವಾಸದ ಉಪಚಾರವಾದರೆ ಗುಣವಾಗುವುದರಲ್ಲಿ ಸಂದೇಹವಿಲ್ಲವೆಂದೆ.

' ವಿನಾಕ್ಷಿಯ ಉಪಚಾರ! ಅವಳೊಂದು ಕಲ್ಲುಬೊಂಬೆ. ಕಲ್ಲು ಹೃದಯುದವಳು. ಈಗಲೂ. . ಈಗಲೂ. . ಅವಳ ಹೃದಯ ಕರಗುವದಾದರೆ. . ನಾನು. . ನಾನು. . ' ಎಂದು ನಿತ್ರಾಣನಾಗಿ ಮಲಗಿದ.

ಅವನ ಇಂಗಿತವರಿತೆ. ಮಾರನೆಯ ದಿನ ಆಫೀಸು ಮುಗಿದ ಕೂಡಲೇ ಆಸ್ಪತ್ರೆಗೆ ಹೋದೆ; ವಿನಾಕ್ಷಿ ಸಿಕ್ಕಲಿಲ್ಲ. ಮನೆಗೆ ಹೋದೆ; ಅಲ್ಲಿಯೂ ಇಲ್ಲ. ಮತ್ತೆ ಆಸ್ಪತ್ರೆಗೆ ಹೋದೆ; ಇಲ್ಲ. ಮತ್ತೆ ಮನೆ. ಇಷ್ಟು ಹೊತ್ತಿಗೆ ರಾತ್ರಿ ಎಂಟು ಗಂಟೆಯಾಗಿತ್ತು; ವಿನಾಕ್ಷಿ ಪೇಟೆಗೆ ಹೋಗಿದ್ದವಳು ಹಿಂದಿರುಗಿದ್ದಳು.

ಅವಳಿಗೆ ಎಲ್ಲವನ್ನೂ ವಿಶದವಾಗಿ ವಿವರಿಸಿದೆ. ಮತ್ತೊಮ್ಮೆ ' ಪ್ರೇಮವನ್ನು ನಟಿಸಿ ' ಗೋಪಿಯನ್ನು ಬದುಕಿಸು ಎಂದೆ. ' ಪ್ರೇಮವನ್ನು ನಟಿಸಿ ' ಎಂಬ ಮಾತು ಅವಳಿಗೆ ಚೆನ್ನಾಗಿ ನಾಟಿಗಬೇಕು. ' ಏನು ? ' ಎಂದು ಬೆರಗಿನಿಂದ ಕೇಳಿದಳು. ಗೋಪಿ ಹೇಳಿದ ಮಾತುಗಳನ್ನು ಹೇಳಿದೆ. ಸ್ವಲ್ಪ ಹೋತ್ತು ಮೌನವಾಗಿದ್ದಳು. ಇದ್ದಕಿದ್ದ ಹಾಗೆ, 'ನಡೆಯಿರಿ ಹೋಗೋಣ' ಎಂದಳು.

ಇಬ್ಬರೂ ಮನೆಗೆ ಹೋದೆವು. ಗೋಪಿ ಬಟ್ಟೆಯ ಮೇಲೆ ಜ್ಞಾನವಿಲ್ಲದೆ ನರಳುತ್ತ ಬಿದ್ದಿದ್ದ. ವಿನಾಕ್ಷಿಯು ಅವನ ಬಟ್ಟೆಯನ್ನೆಲ್ಲ ತಾನೇ ಸರಿಯಾಗಿ ಮಾಡಿ, ತನ್ನ ಕೈವಸ್ತ್ರವನ್ನು ಒದ್ದೆಮಾಡಿಕೊಂಡು ಗೋಪಿಯ ಹಣೆ ಚೆನ್ನಾಗಿ ಒರಸಿ, ಅಲ್ಲಿಯೇ ಒದ್ದೆಬಟ್ಟೆ ಹಾಕಿ, ಥರ್ಮಾಮೀಟರ್ ಇಟ್ಟು ನೋಡಿದಳು. ಜ್ವರ ೧೦೪–೧೦೫ ಇತ್ತಂತೆ.

ಗೋಪಿಗೆ ಮೈಮೇಲೆ ಜ್ಞಾನವೇ ಇರಲಿಲ್ಲ; ನಾನು, ವಿನಾಕ್ಷಿ ಬಂದದ್ದೇ ಗೊತ್ತಾಗಿರಲಿಲ್ಲ. ' ವಿನಾಕ್ಷಿ ಬಂದಿದ್ದಾಳೆ ' ಎಂದೆ. ಮಾತೇ ಇಲ್ಲ. ಸ್ವಲ್ಪ ಹೊತ್ತು ನಾನೂ ವಿನಾಕ್ಷಿಯೂ ಮೌನವಾಗಿ ಕುಳಿತಿದ್ದೆವು.

ಗೋಪಿ ಅತ್ತ ಇತ್ತ ಹೊರಳಲು ಮೊದಲುಮಾಡಿದ. ಸ್ವಲ್ಪ ಜ್ಞಾನ ಬಂದಂತೆ ತೋರಿತು.

'ನಾನು, ಏನಾಕ್ಷಿ. ಬಂದಿದ್ದೇನೆ' ಎಂದಳು ಏನಾಕ್ಷಿ.

'ಏನಾ..' ಎಂದ ಗೋಪಿ; ಕೈನೀಡಲು ಹವಣಿಸಿದ.

ಏನಾಕ್ಷಿ ಅರಿತಳು. ಅವನ ಎರಡು ಕೈಗಳನ್ನು ಹಿಡಿದುಕೊಂಡಳು. ಅವನ ಹಣೆಗೆ ಮುತ್ತಿಟ್ಟಳು. ಕೆನ್ನೆಗೆ ಕೆನ್ನೆ ಒತ್ತಿದಳು. ಕೋಮಲ ಕಂಠದಿಂದ, ಆದರೂ ನೊಂದ ದನಿಯಿಂದ ಹೇಳಿದಳು.

'ಗೋಪಾಲ್, ಗೋಪಿ ಎಂದರೆ ನಿನಗೆ ಹೆಚ್ಚು ಪ್ರೀತಿ, ಗೋಪಿ ಎಂದೇ ಕರೆಯುತ್ತೇನೆ. ಗೋಪಿ, ನನ್ನ ಗೋಪಿ, ನನ್ನ ಹೃದಯ ಕರಗಿದೆ. ಈಗ ನನ್ನ ಶಪಥ ಮುರಿದಿದ್ದೇನೆ. ನಿನ್ನವಳಾಗಿದ್ದೇನೆ. ನಿನ್ನನ್ನು ಪ್ರೀತಿಸುತ್ತೇನೆ, ಸಂಪೂರ್ಣವಾಗಿ ಪ್ರೀತಿಸುತ್ತೇನೆ. ನಿನಗೆ ವಾಸಿಯಾದ ಮೇಲೆ ನಿನ್ನ ಜೊತೆಯೇ ವಾಸಮಾಡುತ್ತೇನೆ. ಬೇಕಾದರೆ ನನ್ನ ಕೆಲಸವನ್ನು ಬಿಟ್ಟು ಬಿಡುತ್ತೇನೆ. ಇನ್ನು ಭಯವಿಲ್ಲ. ಜ್ವರದ ತಾಪದ ಜೊತೆಗೆ ಮನಸ್ಸಿನ ತಾಪ ಬೇಡ. ಶಾಂತವಾಗಿ ನಿದ್ದೆ ಹೋಗು. ಬೆಳಗ್ಗೆ ಬಂದು ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತೇನೆ. ಅಲ್ಲಿ ಬೇಗ ವಾಸಿಯಾಗುತ್ತೆ. ಹಟ ಮಾಡಬೇಡ'

ನಾನು ಗೋಪಿಯನ್ನೇ ದೃಷ್ಟಿಸಿ ನೋಡುತ್ತಿದ್ದೆ. ಅವನ ಮುಖ ಒಂದು ಬಗೆಯ ಗೆಲುವಿನಿಂದ ಕೂಡಿತು. ಮುಖದಲ್ಲಿ ಅಪೂರ್ವವಾದ ನಗೆ ಮೂಡಿತು. ಹಾಗೆಯೇ ನಿದ್ದೆಹೋಗುತ್ತಿರುವಂತೆ ತೋರಿತು.

'ಇನ್ನು ನೀವು ಹೋಗಿ. ಹೊತ್ತಿಗೆ ಮುಂಚೆ ದಯವಿಟ್ಟು ಬಂದರೆ ಇಬ್ಬರೂ ಆಸ್ಪತ್ರೆಗೆ ಹೋಗಿ ಬರೋಣ. ಕತ್ತಲೆಯಾಯಿತು. ಏನು ಮಾಡಲಿ? ಗೋಪಿಯ ಸ್ಥಿತಿ ವಿಪರೀತವಾಗಿದೆ. ಇಲ್ಲದಿದ್ದರೆ ಜೊತೆಗೆ ಬರುತ್ತಿದ್ದೆ.' ಎಂದೆ. 'ಏನೂ ಪರವಾಯಿಲ್ಲ. ನನಗೆ ಅಭ್ಯಾಸವಿದೆ' ಎಂದು ಹೊರಟಳು.

ಮತ್ತೆ ಗೋಪಿಯನ್ನು ನೋಡಿದೆ. ಅದೇ ಗೆಲವು, ಅದೇ ನಗುಮುಖ. ನಾನು ಹಾಗೆಯೇ ಒಂದು ಕಡೆ ಚಾಪೆಯ ಮೇಲೆ ಮಲಗಿಕೊಂಡೆ. ಯೋಚನೆ ತೆರೆತೆರೆಯಾಗಿ ಬರುತ್ತಿತ್ತು. ಆಹಾ! ಏನಾಕ್ಷಿಯ ಪ್ರೇಮನಟನೆಯೇ!

ಎಂಥ ಮೋಹನಾಸ್ತ್ರ! ಏನಾದರೂ ಆಗಲಿ, ಅವಳೇ ಹೇಳಿದ ಹಾಗೆ, ಸತ್ ಪರಿಣಾಮವಾಗುವುದಾದರೆ ಪ್ರೀತಿಯನ್ನು ನಟಿಸಿದರೂ ಚಿಂತೆಯಿಲ್ಲ, ದೇವರ ದಯದಿಂದ ಗೋಪಿ ಬದುಕಲಿ. ಈ ಸಲ ಒಳ್ಳೆ ಹೆಣ್ಣು ಹೇಗಾದರೂ ಪತ್ತೆ ಮಾಡಿ ಅವನಿಗೆ ಮದುವೆ ಮಾಡಿಸಿಬಿಡುತ್ತೇನೆ. ಏನಾಕ್ಷಿಯ ಮೇಲಿನ ಮೋಹ ತಪ್ಪಿಹೋಗುತ್ತೆ....ಇದ್ದಕ್ಕಿದ್ದ ಹಾಗೆ ಮನೆಯ ಮೇಲಿನ ಯೋಚನೆ: ಮನೆಯಲ್ಲಿ ಬೆಳಗ್ಗೆ ಹೊರಟವನು ಇನ್ನೂ ಹೋಗಿಲ್ಲ; ಹೆಂಡತಿ, ಮಗು—ಇರಲಿ; ಖಾಯಿಲೆಯ ಗೆಳೆಯನ ಯೋಗಕ್ಷೇಮ ದೊಡ್ಡದು; ಸುಶೀಲ ಬಾಗಿಲು ಹಾಕಿಕೊಂಡು ಮಲಗಿರುತ್ತಾಳೆ; ಒಕ್ಕಲಗಿತ್ತಿಯನ್ನಾದರೂ ಜೊತೆಗೆ ಇರಿಸಿಕೊಂಡಿರುತ್ತಾಳೆ–ಹೀಗೇ ಸಮಾಧಾನ ತಂದುಕೊಂಡೆ. ಆಮೇಲೆ ಮತ್ತೆ ಗೋಪಿಯ ಯೋಚನೆ, ಏನಾಕ್ಷಿಯ 'ಪ್ರೇಮದ ನಟನೆ'ಯ ಬಾವನೆ. . . .ಹಾಗೆಯೇ ಬಹುಹೊತ್ತಿನ ಮೇಲೆ ನಿದ್ದೆ ಬಂತು.

ಬೆಳಗ್ಗೆ ಏನಾಕ್ಷಿ ಒಂದು ಕೂಗಿದಾಗಲೇ ಎಚ್ಚರ. ಪಟಕ್ಕನೆ ಎದ್ದು ಹೋಗಿ ಬಾಗಿಲು ತೆಗೆದೆ. ಏನಾಕ್ಷಿ ಆತುರಾತುರವಾಗಿ ಬಂದಳು. 'ಗೋಪಿ ಇನ್ನೂ ಎದ್ದಿಲ್ಲವೆ?. . . .' ಎಂದು ಕೇಳಿದಳು.

ನಾನು ಗೋಪಿಯ ಹತ್ತಿರ ಹೋದೆ. 'ಎಬ್ಬಿಸಬೇಡಿ, ಸಿಧಾನವಾಗಿ ಏಳಲಿ' ಎಂದು ಅವಳೂ ಹತ್ತಿರ ಬಂದಳು.

ನಾನು ಹಾಗೆಯೇ ಗೋಪಿಯನ್ನು ನೋಡುತ್ತ ನಿಂತೆ; ಅವಳೂ ನೋಡುತ್ತ ನಿಂತಳು.

ಹಿಂದಿನ ರಾತ್ರಿ ಏನಾಕ್ಷಿ 'ನಿನ್ನವಳಾಗಿದ್ದೇನೆ; ನಿನ್ನನ್ನು ನಿಜವಾಗಿಯೂ ಪ್ರೀತಿಸುತ್ತೇನೆ' ಎಂದಾಗ ಯಾವ ಗೆಲವು, ಯಾವ ನಗೆ ಅವನ ಮುಖದಲ್ಲಿ ಮೂಡಿದ್ದುವೋ ಅದೇ ಗೆಲವು, ಅದೇ ನಗೆ ಈಗಲು ಮಾಸದೆ, ಸ್ಥಿರವಾಗಿ, ಸ್ಫುಟವಾಗಿ, ಪ್ರೇಮವನ್ನು ಬೀರುವಂತೆ ಅಚ್ಚೊತ್ತಿ ನೆಲಸಿದ್ದುವು.

ಏನಾಕ್ಷಿ ಗೋಪಿಯ ಪಕ್ಕದಲ್ಲಿ ಕುಳಿತಳು. ಮೃದುವಾಗಿ ಹಣೆ ಮುಟ್ಟಿದಳು. ಕೈಹಿಡಿದುಕೊಂಡಳು. 'ಗೋಪೀ' ಎಂದು ಚೀರಿದಳು. 'ಗೋಪೀ' ಎಂದು ನಾನೂ ಸಹ ಕೂಗಿ ಕೂಗಿ ಕೂಗಿಟ್ಟೆ; ಅವನನ್ನು ಅಲ್ಲಾಡಿಸಿದೆ. ಆದರೆ ಮಾತ್ರ ದೀರ್ಘನಿದ್ರೆಯಿಂದ ಅವನಿಗೆ ಎಚ್ಚರವಾಗಲಿಲ್ಲ.

ಅವನ ಮುಖದ ಮೇಲೆ ಇನ್ನೂ ಅದೇ ಗೆಲವು, ಅದೇ ನಗೆ! ಪ್ರೇಮದ ಗೆಲವು, ಗೆಲವಿನ ನಗೆ.

ಏನಾಕ್ಷಿ ತುಸ ಹೊತ್ತು ಗೋಪಿಯ ಕೈಹಿಡಿದು ಕುಳಿತಿದ್ದಳು; ಅವಳ ಕಣ್ಣುಗಳಿಂದ ಹನಿಗಳು ಜಗುಳುತ್ತಿದ್ದುವು.

'ಗೋಪೀ! ಗೋಪೀ! ಏಳು, ಎದ್ದು ಬಾ, ನಾನು ಈಗ ಪ್ರೇಮವನ್ನು ನಟಿಸುತ್ತಿಲ್ಲ. ನನ್ನ ಸರ್ವಸ್ವವೂ ನಿನ್ನದು. ಎದ್ದು ಬಾ' ಎಂದು ಹಾಗೆಯೇ ಅವನ ಎದೆಯ ಮೇಲೆ ತಲೆಯಿಟ್ಟಳು.

ಗೋಪಿಗೆ ಮಾತ್ರ ಎಚ್ಚರವಾಗಲಿಲ್ಲ! ಆದರೆ ಅವನ ಮುಖದಲ್ಲಿ ಅದೇ ಗೆಲವು, ಅದೇ ನಗೆ.

---

# ಕುಮುದೆ   

ಈಗ ಒಂದು ತಿಂಗಳಿಂದ ಸುಂದರ ಸ್ಕೂಲು ಬಿಟ್ಟೊಡನೆ ನೇರವಾಗಿ ಮನೆಗೆ ಬಂದುಬಿಡುತ್ತಿದ್ದ. ಹೆಂಡತಿ ತುಂಬು ಬಸುರಿ.

ಶಾರದೆಯ ತಾಯಿ ಸೀತಮ್ಮನವರು ಮಗಳ ಬಾಣಂತನಕ್ಕೆಂದು ಬಂದು ಒಂದು ತಿಂಗಳಾಗಿತ್ತು. ಬಂದ ಹೊಸದರಲ್ಲಿಯೇ ಅವರು ಧೈರ್ಯ ಮಾಡಿಕೊಂಡು ಸುಂದರನಿಗೆ ಎಚ್ಚರಿಕೆ ಕೊಟ್ಟಿದ್ದರು: 'ದಿನ ತುಂಬುತ್ತ ಬಂದಿದೆ; ಇದೇ ಚೊಚ್ಚಲು; ಸ್ಕೂಲು ಬಿಟ್ಟಕೂಡಲೆ ಮನೆಗೆ ಬಂದು ಬಿಟ್ಟರೆ....ತರ್ಕಾರಿ ಬೆಳಗ್ಗೆ ಹೊತ್ತು ಇಲ್ಲೇ ಎಲ್ಲಾದರೂ ತಂದುಕೊಂಡ ರಾಯಿತು' ಎಂಗು ಮೊದಲಾಗಿ. ಅತ್ತೆಮ್ಮನವರ ಮಾತನ್ನು ಮೀರಲಾಗ ಲಿಲ್ಲ ಸುಂದರನಿಗೆ; ಸ್ಕೂಲು ಬಿಟ್ಟೊಡನೆ ಅತ್ತ ಇತ್ತ, ವಾಕಿಂಗ್, ಬಾಯ ಸ್ಕೋಪ್, ಕ್ರಿಕೆಟ್, ಎಂದು ಹೋಗದೆ ನೇರವಾಗಿ ಮನೆಗೆ ಬಂದುಬಿಡುತ್ತಿದ್ದ.

ಈ ಹೊತ್ತೂ ಸ್ಕೂಲು ಬಿಟ್ಟ ತಕ್ಷಣವೇ ಮನೆಗೆ ಬಂದ. ಆದರೆ ಮನೆಯ ಮುಂಬಾಗಿಲಿನ ಬೀಗ ಹಾಕಿತ್ತು. ಏಕೆ ಎಂದು ಯೋಚಿಸಬೇಕಾ ಗಿರಲಿಲ್ಲ, ಅಕ್ಕಪಕ್ಕದವರನ್ನು ಕೇಳಬೇಕಾಗಿರಲಿಲ್ಲ. ಹೆರಿಗೆಯ ಆಸ್ಪತ್ರೆಯ ಕಡೆಗೆ ಧಾವಿಸಿದ.

ಅರ್ಧ ದಾರಿಯಲ್ಲಿ ಮನೆಯ ಮುಸುರೆಯವಳು ಕಂಡಳು. ಅವಳೇ ನಿಂತು ಮಾತಾಡಿಸಿದಳು: 'ಈಗ ತಾನೇ ಒಂದು ತಾಸಾಯ್ತು ಬುದ್ಧಿ. ತಾಯವ್ರು ಅಮ್ಮಾವರ್ನ ಕರ್ಕೊಂಡೋದ್ರು. ನನ್ನೂ ಜೊತೇಗೆ ಕರ್ಕೊಂಡ್

ಹ್ವಾಗಿದ್ರು. ಮನೆ ತಾವ್ಕಿರು, ಬುದ್ದಿಯೋರು ಬಂದ್ರೆ ಕಳ್ಸು ಅಂದ್ರು. ಮನೆ ಕಡೀಕೋಗ್ತಾ ಅವ್ನಿ. ಬೇಗ್ ದಯಮಾಡ್ಸಿ ಬುದ್ದಿ....'

'ಇನ್ನೂ......ಅಷ್ಟರಲ್ಲೆ ಹೊರಟು ಬಂದೆಯೋ ನೀನು ?' ಎಂದು ತವಕಗೊಂಡು ಕೇಳಿದ ಸುಂದರ.

'ಹೋಗು ಅಂದ್ರು. ಹೊಂಟ್ ಬಂದೆ.'

'ಅಲ್ಲ....ಇನ್ನೂ....'

'ನಿಮ್ಮನ್ನ ಕಳ್ಸು ಅಂದ್ರು ಬುದ್ದಿ.'

'ಅಲ್ಲಾ ಕಣೋ. ಹೆಣ್ಣೋ ಗಂಡೋ....?'

'ಅಯ್ಯೋ ಬುದ್ಧಿ. ಮರ್ತ್ಹೋತು. ಹೆಣ್ಣೋ ಗಂಡೋ ಅಂತ ಹೇಳದ್ರು. ಕೇಳ್ಕೊಂಡ್ ಬರ್ತೀನಿ, ಇಲ್ಲೆ ಇರಿ ಬುದ್ದಿ.'

'ನೀನು ಜಾಣ. ಮನೆಗೆ ಹೋಗು. ಹೆಣ್ಣಾದರೇನು ಗಂಡಾದರೇನು ಸಂಸಾರ ತಾಪತ್ರಯದ ಪೀಠಿಕೆ ಹಾಕೋಕೆ.'

ಆಸ್ಪತ್ರೆಯ ಕಡೆಗೆ ಇಮ್ಮಡಿ ವೇಗದಿಂದ ಸಾಗಿ ಹೋದ. ಹೆಬ್ಬಾಗಿಲಿನಲ್ಲಿ, 'ಯಾವ ವಾರ್ಡು?' ಎಂದು ಮುಸುರೆಯುವಳನ್ನು ಕೇಳುವುದು ಮರೆತದ್ದು ಜ್ಞಾಪಕ ಬಂದಿತು. ಹೆಣ್ಣು ಗಂಡು ಎಂಬುದನ್ನು ಮರೆತವಳಿಗೆ ವಾರ್ಡಿನ ಹೆಸರು ಎಲ್ಲಿ ಜ್ಞಾಪಕವಿದ್ದೀತು ಎಂದು ಸಮಾಧಾನಗೊಂಡು ಆಸ್ಪತ್ರೆ ಹೊಕ್ಕ.

ಆಸ್ಪತ್ರೆ ಹೊಕ್ಕವನು ವರಾಂಡದ ಎಡಗಡೆಗೆ ತಿರುಗಿದ. ಎಡಗಡೆ ಇರಲಾರದು, ಎಂದು ಬಲಕ್ಕೆ ತಿರುಗಿದ. ಸ್ಥಳ ಗೊತ್ತಿಲ್ಲದಿರುವಾಗ ಎಡವಾದರೇನು, ಬಲವಾದರೇನು ? ಮತ್ತೆ ಎಡಕ್ಕೇ ತಿರುಗಿದ.

ಎಡಗಡೆ ಉದ್ದಕ್ಕೂ ವಾರ್ಡುಗಳ ಹೆಸರುಗಳನ್ನು ಓದಿಕೊಂಡು ನಡೆದ.

ಒಂದು ವಾರ್ಡಿನಿಂದ ದಾದಿಯೊಬ್ಬಳು ಹೊರಕ್ಕೆ ಬಂದಳು. 'ನರ್ಸ್' ಎಂದು ಸುಂದರ ಸಂಬೋಧಿಸಿದ. 'ಏನು ? ಯಾರು ?' ಎಂದಳು ದಾದಿ.

'ಕೊಂಚ ಹೊತ್ತಿನ ಕೆಳಗೆ..ಶಾರದಮ್ಮ ಅಂತ....'

'ಶಾರದಮ್ಮ..ಶಾರದಮ್ಮ....ಈ ವಾರ್ಡಿನಲ್ಲಿ ಇಲ್ಲ ಅಂತ ಕಾಣುತ್ತೆ. ಇನ್ನೂ ಸ್ವಲ್ಪ ಮೇಲಕ್ಕೆ ಹೋಗಿ ವಿಚಾರಿಸಿ' ಎಂದು ಚಡಪಡನೆ ಮುಂದೆ ಹೋದಳು.

ಆ ಹೊತ್ತಿಗೆ ಎದುರಿನಿಂದ ಡಾಕ್ಟರ್ ಒಬ್ಬಳು ಬಂದಳು: 'ಕುಮುದ ಹೇಗಿದಾರೆ ನರ್ಸ್' ಎಂದು ಕೇಳಿದಳು.

'ಟೆಂಪರೇಚರ್ (ಜ್ವರ) ಇಳಿದಿಲ್ಲ' ಎಂದು ನುಡಿದಳು ನರ್ಸ್.

'ಇಳಿದಿಲ್ಲವೇನು! ಎಲ್ಲಿ ನೋಡೋಣ ನಡಿ' ಎಂದು ನರ್ಸಿನೊಡನೆ ವಾರ್ಡು ಹೊಕ್ಕಳು.

ಕುಮುದ! ನನ್ನ ಕುಮುದ ಇರಬಹುದೆ? ತಾನು ಚಿಕ್ಕಂದಿನಲ್ಲಿ ಒಡನಾಡಿ ನಲಿದು ಒಲಿದ ಕುಮುದನೆ? ಕುಮುದ ಎಂಬ ಹೆಸರಿನ ತರುಣಿಯರು ಎಷ್ಟೋ ಮಂದಿ ಇದ್ದಾರೆ. ಎಷ್ಟು ಸಮಾಧಾನ ಹೇಳಿಕೊಂಡರೂ ಮನಸ್ಸು ಕಾಲನ್ನು ಮುಂದಿಡಗೊಡಲಿಲ್ಲ; ಹೃದಯ ಕೇಳಲಿಲ್ಲ; ಒಂದೇ ಸಮನೆ ಡವಡವ ಎನ್ನತೊಡಗಿತು; ತನ್ನ ಕುಮುದನೇ ಎಂದು ನುಡಿಯ ಹತ್ತಿತು.

ಸುಂದರ, ಸುಮ್ಮನೆ ವಾರ್ಡನ್ನು ಹೊಕ್ಕು, ಡಾಕ್ಟರ್, ನರ್ಸ್ ಇದ್ದ ಮಂಚದ ಬಳಿ ಸೇರಿದ.

ಮಂಚದ ಬಳಿ, ಕುಮುದನ ತಲೆಯ ಹತ್ತಿರ ಗುರುತು ಕಾಣದ ಗಂಡಸೊಬ್ಬ ನಿಂತಿದ್ದ—ಕುಮುದನ ಗಂಡನಿರಬಹುದೆಂದು ಸುಂದರ ಊಹಿಸಿದ. ಪಕ್ಕದ ತೊಟ್ಟಿಲಿನಲ್ಲಿದ್ದ ಮಗು ಅಳುತ್ತಿತ್ತು.

ಸುಂದರ ಸ್ವಲ್ಪ ದೂರದಿಂದಲೇ ಕುಮುದಳ ಮುಖ ನೋಡಿದ. ಹಣೆಯ ಮೇಲೆ ಒದ್ದೆಯ ಬಟ್ಟೆ ಹಾಕಿತ್ತು. ಮುಖ ಕಂಗೆಟ್ಟಿತ್ತು. ದೃಷ್ಟಿ ಗುರಿಯಿಲ್ಲದೆ ಅತ್ತ ಇತ್ತ ಚಲಿಸುತ್ತಿತ್ತು. ದೂರದಿಂದಲೇ 'ತನ್ನ' ಕುಮುದ ಎಂದು ದೃಢವಾಯಿತು. ಅಲ್ಲಿ ಹಾಗೆ ನಿಂತಿರುವುದು ಅಸಭ್ಯತನವೆಂದು ಹೊರಹೊರಟ.

ಸ್ವಲ್ಪ ಹೊತ್ತಾದ ಮೇಲೆ ಶಾರದೆ ಇದ್ದ ವಾರ್ಡು ಸಿಕ್ಕಿತು. ಬೇರೊಬ್ಬ ನರ್ಸು (ಆ ವಾರ್ಡಿಗೇ ಸೇರಿದವಳು) ಸುಂದರನನ್ನು ಒಳಕ್ಕೆ ಕರೆದುಕೊಂಡು ಹೋಗಿ, ಶಾರದೆಯ ಬಳಿಗೆ ಒಯ್ದು, ತೊಟ್ಟಿಲಿನಲ್ಲಿದ್ದ ಮಗು ತೋರಿಸಿ—

'ನಿಮ್ಮದೋ ಮಗು?' ಎಂದು ಕೇಳಿದಳು.

ಶಾರದೆ ಮುಗುಳ್ನಗೆ ನಕ್ಕಳು. ಸುಂದರ ಗೊಳ್ಳನೆ ನಕ್ಕ. ಸೀತಮ್ಮ

ನವರು ಸೆರಗಿನಿಂದ ಬಾಯಿ ಮುಚ್ಚಿಕೊಂಡು ಮುಖ ಅತ್ತಕಡೆ ತಿರುಗಿಸಿದರು. ದಾದಿ ಹೊರಟು ಹೋದಳು.

' ಸ್ವಸ್ಥವಾಗಿದ್ದೀಯಾ ?' ಎಂದು ಸುಂದರ ಕೇಳಿದ. ಶಾರದೆ ಹೂಗುಟ್ಟಿದಳು. ' ವೆಂಕಟಾಚಲಪತಿಯ ದಯದಿಂದ ಮಗು, ಬಾಣಂತಿ ಸುಖವಾಗಿದ್ದಾರೆ' ಎಂದರು ಸೀತಮ್ಮನವರು.

ಈಗ ಸುಂದರನಿಗೆ ನಿತ್ಯ ಎರಡು ಹೊತ್ತೂ ಆಸ್ಪತ್ರೆ ' ಡ್ಯೂಟಿ ' ಬಿದ್ದಿತ್ತು—ಬೆಳಗ್ಗೆ ಒಂದು ಸಲ ಕಾಫಿ ತೆಗೆದುಕೊಂಡು ಹೋಗುತ್ತಿದ್ದ; ಸಂಜೆ ನೋಡಿಕೊಂಡು ಬರಲು ಹೋಗುತ್ತಿದ್ದ.

ಶಾರದೆ ಹೆತ್ತು ಐದು ದಿನವಾಗಿತ್ತು. ಈ ಐದು ದಿನವೂ ಸುಂದರ ಹೇಗಾದರೂ ಮಾಡಿ ಮೊತ್ತ ಮೊದಲು ಕುಮುದೆಯ ಮುಖದರ್ಶನ ಮಾಡಿ, ಬಳಿಕ ಶಾರದೆಯ ಬಳಿಗೆ ಹೋಗುತ್ತಿದ್ದ. ಕುಮುದೆಯ ಹತ್ತಿರ ಹೋಗಿ, ಒಮ್ಮೆ ಅವಳನ್ನೂ ಮಾತನಾಡಿಸಬೇಕೆಂದು ಅವನ ಮನಸ್ಸು ಹಾತೊರೆಯುತ್ತಿತ್ತು. ಆದರೆ ತಾನು ಅಲ್ಲಿಗೆ ಹೋದಾಗಲೆಲ್ಲ ಅವಳ ಗಂಡ ಬಳಿಯಿರುತ್ತಿದ್ದ. ಆದ್ದರಿಂದ ಸುಂದರ ಬೇಗನೆ ಒಂದು ಬಾಗಿಲಿನಿಂದ ಹೊಕ್ಕು, ಓರೆಗಣ್ಣಿನಿಂದ ಕುಮುದೆಯ ಮುಖ ನೋಡಿ ನಿಟ್ಟುಸಿರು ಬಿಟ್ಟು ಮುಂದಕ್ಕೆ ಹೋಗುತ್ತಿದ್ದ. ಶಾರದೆಯ ಬಳಿಗೆ ಹೋದಾಗ ತನ್ನ ಮನಸ್ಸಿನ ಉದ್ವೇಗವನ್ನು ಬಹು ಪ್ರಯಾಸದಿಂದ ತಡೆದುಕೊಳ್ಳುತ್ತಿದ್ದ.

ಒಮ್ಮೆ ಶಾರದೆ ತನ್ನ ಗಂಡನ ಕುಗ್ಗಿದ ಮುಖ ನೋಡಿ ಕೇಳಿದಳು. ' ಏನು ? ಯಾಕೆ ಇಷ್ಟು ಯೋಚನೆ ? ಪಾಪ, ಸುತ್ತಾಟ ಹೆಚ್ಚಾಗಿದೆ. ಹೊತ್ತಿಗೆ ಹೊತ್ತಿಗೆ ಅನ್ನವಿಲ್ಲ, ನಿದ್ದೆಯಿಲ್ಲ. '

ಸುಂದರನ ಮನೋವೈಕಲ್ಯಕ್ಕೆ ಇದು ಕಾರಣವಾಗಿರಲಿಲ್ಲ; ಆದ್ದರಿಂದ ಅರ್ಥವಿಲ್ಲದ ಹುಸಿನಗೆ ನಕ್ಕ.

' ಆಗಲೇ ಹೆಣ್ಣುಮಗಳಿಗೆ ವರನ ಯೋಚನೆ ಬಂತೇನೋ ! ಹೆಣ್ಣುಮಕ್ಕಳಾಯಿತೆಂದರೆ ಗಂಡಸರಿಗೆ ಅದೇನು ಅಸಹ್ಯವೋ ! ' ಎಂದು ಮೆಲ್ಲನೆ ಗುಣಗುಟ್ಟಿದಳು ಶಾರದೆ.

ಸುಂದರ ಈ ಸಲ ನಿಜವಾಗಿಯೂ ನಕ್ಕ.

* * * *

ಹತ್ತನೆಯ ದಿನ. ಎಂದಿನಂತೆ ಸುಂದರ ಈ ದಿನವೂ ಬೆಳಗ್ಗೆ ಮೊದಲು ಕುಮುದೆಯ ವಾರ್ಡಿಗೆ ಹೋದ. ಅವಳ ಗಂಡ ಬಳಿ ಇರಲಿಲ್ಲ. ಸುಂದರ ಗಟ್ಟಿಮನಸ್ಸು ಮಾಡಿಕೊಂಡು ಅವಳ ಬಳಿಗೆ ಹೋದ. ಮೆಲ್ಲನೆ, ತುಂಬ ಪ್ರೇಮದ ದನಿಯಿಂದ 'ಕುಮುದ' ಎಂದ. ಮಾತಾಡಲಿಲ್ಲ. ಸ್ವಲ್ಪ ಗಟ್ಟಿಯಾಗಿ ಮತ್ತೊಮ್ಮೆ ಕೂಗಿದ. ಕುಮುದ ಕಣ್ಣುಬಿಟ್ಟು ನೋಡಿದಳು. ಮಾತಾಡುವುದಕ್ಕೆ ಪ್ರಯತ್ನಿಸಿದಳು; ಆಗಲಿಲ್ಲ. ಸುಂದರನ ಕೈಲಿದ್ದ ಥರ್ಮಾಸ್‌ಫ್ಲಾಸ್ಕ್ ಕಂಡು ಬಾಯಿ ಚಪ್ಪರಿಸಿದಳು. ಸುಂದರ ಅರಿತ. ಸ್ವಲ್ಪ ಕಾಫಿ ಬಗ್ಗಿಸಿಕೊಂಡು ಅವಳ ಬಾಯಿಗೆ ಹಾಕುತ್ತ ಬಂದ. ಕುಮುದ ಇನ್ನೂ ಎರಡು ಮೂರು ಗುಟುಕು ಕುಡಿದಿರಲಿಲ್ಲ; ಅಷ್ಟು ಹೊತ್ತಿಗೆ ಅವಳ ಗಂಡ ಥರ್ಮಾಸ್‌ಫ್ಲಾಸ್ಕ್ ಹಿಡಿದುಕೊಂಡು ಒಂದು ಪಕ್ಕದಲ್ಲಿ ಸುಮ್ಮನೆ ನಿಂತರು. ಕುಮುದ ಕಾಫಿ ಸಾಕೆಂದು ಸನ್ನೆ ಮಾಡಿದಳು.

ಕುಮುದೆಯ ಗಂಡ ಮಾತಾಡಲಿಲ್ಲ. ಸುಂದರನ ಮುಖವನ್ನು ಮಾತ್ರ ಎರಡು ಮೂರು ಸಲ 'ನೀವು ಯಾರು? ಇಲ್ಲಿಗೇಕೆ ಬಂದಿರಿ?' ಎಂದು ಕೇಳುವಂತೆ ಅಸಮಾಧಾನದಿಂದ ದೃಷ್ಟಿಸಿ ನೋಡಿದರು. ಸುಂದರ ತಾನೇ ಎರಡು ಮಾತಾಡಿದ. 'ತಮ್ಮ ಕುಟುಂಬಕ್ಕೆ ತುಂಬ ಬಾಯಾರಿಕೆ ಅಂತ ಗೊತ್ತಾಯಿತು. ನನ್ನ ಹೆಂಡತಿಗೆ ಕಾಫಿ ತೆಗೆದುಕೊಂಡು ಹೋಗುತ್ತಿದ್ದೆ. ಸ್ವಲ್ಪ ಕುಡಿಸಿದೆ, ಅಷ್ಟೆ. ಸ್ವಲ್ಪ ಮೇಲು ಅಂತ ಕಾಣುತ್ತೆ ಈಗ. ಹೋಗಿ ಬರುತ್ತೇನೆ.'

'ಬಹಳ ಉಪಕಾರ ಮಾಡಿದಿರಿ. ವಿಶ್ವಾಸವಿರಲಿ' ಎಂದು ಸಮಾಧಾನದಿಂದ ನುಡಿದರು ಕುಮುದಳ ಗಂಡ. ಸುಂದರ ಹೊರಟು ಹೋದ.

ಹನ್ನೊಂದನೆಯ ದಿನ ಸುಂದರ ಹೆಂಡತಿಯನ್ನು ಮನೆಗೆ ಕರೆದುಕೊಂಡು ಹೋಗಬೇಕಾಗಿತ್ತು. ಕರೆದುಕೊಂಡು ಹೋಗಬಹುದೆಂದು ಡಾಕ್ಟರು ಅನುಮತಿ ಕೊಟ್ಟಿದ್ದರು. ಈ ಗಲಾಟೆಯಲ್ಲಿ ಕುಮುದೆಯನ್ನು ನೋಡಲು ಆ ಬೆಳಗ್ಗೆ ಅವನಿಗೆ ಆಗಲಿಲ್ಲ. ಮೂರನೆಯ ದಿನ ಮಗುವಿಗೆ ನಾಮಕರಣದ ಶಾಸ್ತ್ರ ಇಟ್ಟುಕೊಂಡಿತ್ತು. ಸಂಜೆ ಸಾಮಾನು ತರಲು ಮಾರ್ಕೆಟ್ಟಿಗೆ ಹೋಗುವ ಮುನ್ನ ಹಾಗೆಯೇ ಆಸ್ಪತ್ರೆಯ ಕಡೆಗೆ ಕಾಲು ಎಳೆಯಿತು. ಕುಮುದೆಯಿದ್ದ ವಾರ್ಡಿಗೆ ಹೋದ. ಅವಳು ಮಲಗಿದ್ದ ಮಂಚದಲ್ಲಿ ಬೇರೆ

ಹೆಂಗಸು ಮಲಗಿದ್ದಳು. ಮಂಚ ಇದ್ದ ಸ್ಥಳವನ್ನು ತಾನು ಮರೆತಿರಬಹು ದೆಂದು ಅತ್ತ ಇತ್ತ ಕತ್ತುಹಾಕಿ ಹುಡುಕುತ್ತಿದ್ದ. ಕುಮುದ ಇರಲಿಲ್ಲ. ಮನೆಗೆ ಕರೆದುಕೊಂಡು ಹೋಗಿರಬಹುದೆಂದು ಯೋಚಿಸುತ್ತ, ತಲೆತಗ್ಗಿಸಿಕೊಂಡು, ನಿಧಾನವಾಗಿ ಹಿಂದಿರುಗುತ್ತಿದ್ದ. ಬಾಗಿಲ ಬಳಿ ಹೋದಾಗ ಇದ್ದಕ್ಕಿದ್ದ ಹಾಗೇ ನಿಂತ. ಗೋಡೆಯ ಅಂಚಿನಲ್ಲಿ, ಮೂಲೆಯಲ್ಲಿ ಇದ್ದ ತೊಟ್ಟಿಲಿನಲ್ಲಿದ್ದ ಮಗು ಅಳುತ್ತಿತ್ತು. ದಾದಿಯೊಬ್ಬಳು ಶೀಸೆಯ ಹಾಲು ಕುಡಿಸುತ್ತ ಮಗು ವನ್ನು ಸಮಾಧಾನಪಡಿಸುತ್ತಿದ್ದಳು. ಹೆತ್ತತಾಯಿ ಬಳಿಯಲ್ಲಿದ್ದಂತೆ ತೋರ ಲಿಲ್ಲ. 'ಅಯ್ಯೋ ಪಾಪ ತಬ್ಬಲಿಯಿರಬಹುದು!' ಎಂದುಕೊಂಡು ಮುಂದೆ ಹೋಗುತ್ತಿದ್ದ. ಅಷ್ಟರಲ್ಲಿ ಕುಮುದೆಯ ಗಂಡ ಎದುರಿಗೆ ಸಿಕ್ಕಿದರು; ಸುಂದರನನ್ನು ಕಂಡರೋ ಇಲ್ಲವೋ, ತೊಟ್ಟಿಲಿನಲ್ಲಿದ್ದ ಮಗುವಿನ ಬಳಿಗೆ ನಡೆದರು.

ಸುಂದರನೇ ನಿಂತು ಮಾತಾಡಿಸಿದ: 'ನಿಮ್ಮ ಕುಟುಂಬವನ್ನು ಕರೆದು ಕೊಂಡ ಹೋದ ಹಾಗೆ ಕಾಣುತ್ತೆ.?'

'ಹೂಂ. ಬೆಳಗ್ಗೆ ಕರೆದುಕೊಂಡು ಹೋಗಿ, ಕಳಿಸಿಬಿಟ್ಟೆ' ಎಂದರು ಕುಮುದೆಯ ಗಂಡ.

ಸುಂದರನಿಗೆ ಅರ್ಥವಾಗಲಿಲ್ಲ. 'ಎಲ್ಲಿಗೆ?' ಎಂದು ಕೇಳಿದ.

'ಪರಲೋಕಕ್ಕೆ' ಎಂದು ಕುಮುದೆಯ ಗಂಡ ಬಿಕ್ಕಿಬಿಕ್ಕಿ ಅಳ ತೊಡಗಿದರು.

ಆಸ್ಪತ್ರೆಯ ದೊಡ್ಡ ಕಟ್ಟಡ ತಲೆಯ ಮೇಲೆ ಕಳಚಿಬಿದ್ದಂತೆ ತೋರಿತು ಸುಂದರನಿಗೆ. ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು.

'ತಮ್ಮ ಹೆಸರು ಸುಂದರರಾಯರೇನು?' ಎಂದು ಕೇಳಿದರು ಕುಮು ದೆಯ ಗಂಡ.

'ಹೌದು' ಎಂದ ಸುಂದರ. ತನ್ನ ಹೆಸರು ಅವರಿಗೆ ಹೇಗೆ ಗೊತ್ತಾ ಯಿತು? ಕುಮುದೆಯೇ ಹೇಳಿರಬೇಕು ಎಂದು ಊಹಿಸಿದ.

ಕುಮುದೆಯ ಗಂಡ, 'ನೋಡಿ, ಸುಂದರರಾಯರೆ....' ಎಂದು ಹೇಳಬೇಕೆಂದಿದ್ದುದನ್ನು ನಿಲ್ಲಿಸಿ, 'ಇಲ್ಲಿ ಗಲಾಟೆಯಾಗಬಹುದು. ಸ್ವಲ್ಪ ವ್ಹರಾಂಡಕ್ಕೆ ಬರುತ್ತೀರ?' ಎಂದರು.

ಇಬ್ಬರೂ ವ್ಹರಾಂಡಕ್ಕೆ ಹೋದರು.

ಕುಮುದೆಯ ಗಂಡ ಮುಂದುವರಿಸಿದನು. ' ನೋಡಿ, ಈ ದಿನ ಬೆಳಗ್ಗೆ ಅವಳು ತೀರಿಕೊಂಡಳು. ಹಸುಳೆಯನ್ನು ತಬ್ಬಲಿ ಮಾಡಿದಳು. ನನ್ನನ್ನು ದಿಕ್ಕಿಲ್ಲದ ಹಾಗೆ ಮಾಡಿದಳು. ಸಾಯುವುದಕ್ಕೆ ಮುಂಚೆ ' ನಾನು ನಿಮ್ಮನ್ನು ಪ್ರೀತಿಸಿದ್ದೇನೆ. ಬದುಕಿದ್ದರೆ ಇನ್ನು ಮುಂದೂ ಪ್ರೀತಿಸುತ್ತಿದ್ದೆ. ನೀವೇ ನನ್ನ ದೈವ. ಆದರೆ ಒಂದು ತಪ್ಪುಮಾಡಿದ್ದೇನೆ. ಒಂದು ಗುಟ್ಟನ್ನು ಬಚ್ಚಿಟ್ಟು ಕೊಂಡಿದ್ದೇನೆ; ನಿಮ್ಮ ಸುಖದ ಜೀವನಕ್ಕೆ ಹುಳಿ ಹಿಂಡಬಾರದೆಂದು ಒಂದು ಗುಟ್ಟನ್ನು ಮಾತ್ರ ಬಚ್ಚಿಟ್ಟುಕೊಂಡಿದ್ದೇನೆ. ನಾನು ಇನ್ನು ಬದುಕುವುದಿಲ್ಲ. ನನ್ನ ತಪ್ಪನ್ನು ಕ್ಷಮಿಸಿ. ಅದನ್ನು ಹೇಳಿಬಿಡುತ್ತೇನೆ. ನಿನ್ನೆ ನನಗೆ ಕಾಫಿ ಕುಡಿಸಿದವರು—ಸುಂದರ—ಅವರು—ನೀವು ನನ್ನ ಒಡೆಯರಾಗುವುದಕ್ಕೆ ಮುಂಚೆ ನನ್ನ ಹೃದಯದ ಒಡೆಯರಾಗಿದ್ದರು ಅವರು. ನಾನು ಬದುಕಿದ್ದರೆ ಮಗುವನ್ನು ಸುಂದರ ಎಂದು ಕರೆಯಬೇಕೆಂಬ ಆಸೆ; ಆದರೆ ಹಾಗೆ ಕರೆಯಲು ಅಳುಕುತ್ತಿದ್ದೆ. ಸಾಯುವುದಕ್ಕೆ ಮುಂಚೆ ನನ್ನ ಆಸೆ ತಿಳಿಸಿ, ತಪ್ಪು ಒಪ್ಪಿ ಕೊಂಡಿದ್ದೇನೆ '—ಎಂದಳು. ಅವಳು ಹೇಳಿದ್ದೆಲ್ಲ ಕಟ್ಟುಕತೆ ಎಂದು ತೋರುತ್ತೆ. ಏಕೆಂದರೆ ಅವಳು ನನ್ನನ್ನು ಅಷ್ಟು ಭಕ್ತಿಯಿಂದ, ಪ್ರೇಮದಿಂದ ಕಂಡು ಕೊಂಡಿದ್ದಳು. '

ಒಮ್ಮೆ ನಿಟ್ಟುಸಿರುಬಿಟ್ಟು, ಸುಂದರ ಹೇಳತೊಡಗಿದ. ' ಕಟ್ಟುಕತೆ ಯೇನೂ ಇಲ್ಲ. ಕುಮುದ ಕಣ್ಮರೆಯಾಗಿರುವುದರಿಂದ, ನಿಮ್ಮ ಒಳ್ಳೆಯತನ ದಿಂದ ನೀವು ನನ್ನ ಅಣ್ಣನ ಹಾಗೆ ಕಾಣುತ್ತಿರುವುದರಿಂದ, ನಿಜ ಹೇಳುತ್ತೇನೆ. ಇಬ್ಬರಿಗೂ ಮದುವೆಯಾಗಿರಲಿಲ್ಲ. ಬಾಲ್ಯದಿಂದ ಒಟ್ಟಿಗೆ ಬೆಳೆದವರು. ಸ್ನೇಹ, ಸಲಿಗೆಯಿತ್ತು. ನನ್ನ ಜೀವಕ್ಕೆ ಅವಳು ಹತ್ತಿರ, ಅವಳ ಜೀವಕ್ಕೆ ನಾನು ಹತ್ತಿರ—ಹೀಗಿತ್ತು. ಆದರೂ, ನನ್ನನ್ನು ಕಂಡರೆ ಅವಳಿಗೆ ಇಷ್ಟೊಂದು ಪ್ರೀತಿಯಿತ್ತು ಎಂಬ ಸಂಗತಿ ನಿಮ್ಮಿಂದಲೇ ತಿಳಿದದ್ದು. ಒಂದು ದಿನವಾದರೂ ಅವಳು—ಸುಂದರಾ, ನಿನ್ನನ್ನು ಪ್ರೀತಿಸುತ್ತೇನೆ—ಎಂದು ಅವಳೆಂದಿರಲಿಲ್ಲ. ನಾನಾದರೂ ಹಾಗೆ ಹೇಳಿರಲಿಲ್ಲ. ಆದರೂ ಒಬ್ಬೊಬ್ಬರಿಗೆ ಜೀವದಲ್ಲಿ ಜೀವರಾಗಿದ್ದೆವು. ಅವಳು ಸತ್ತದ್ದರಿಂದ ನಿಮಗೆಷ್ಟು ದುಃಖವೋ ನನಗೂ ಅಷ್ಟೇ ದುಃಖ '

ಕುಮುದೆಯ ಗಂಡ ಸ್ವಲ್ಪ ಸಮಾಧಾನಗೊಂಡು ನುಡಿದರು. ' ಯಾವ ಯಾವ ಜೀವ ಯಾರು ಯಾರನ್ನು ಹಿಡಿದು ಎಲ್ಲಿಗೆ ಹೋಗ ಬೇಕೋ ? ಆ ಜೀವದ ಜಾಡು ಕಂಡಿರುವವರು ಯಾರು ? ಇನ್ನು ಅವಳಿ ಗಾಗಿ ಕೊರಗಿ ಫಲವಿಲ್ಲ. ಈ ತಬ್ಬಲಿ ಮಗುವಿನದೇ ದೊಡ್ಡ ಯೋಚನೆ ಯಾಗಿ ಬಿಟ್ಟಿದೆ. ಆಸ್ಪತ್ರೆಯವರನ್ನು ಎಷ್ಟೋ ಬಗೆ ಕೇಳಿಕೊಂಡೆ, ಒಂದು ವರ್ಷವಾಗುವವರೆಗಾದರೂ ಮಗುವನ್ನು ಕಾಪಾಡಿಕೊಡಿ ಎಂದು. ಒಬ್ಬಳು ನರ್ಸ್ ಕೇಳುತ್ತಿದ್ದಾಳೆ, ನನಗೆ ಕೊಡಿ ಸಾಕಿಕೊಳ್ಳುತ್ತೇನೆ ಎಂತ. ಏನು ಮಾಡುವುದಕ್ಕೂ ತೋಚುವುದಿಲ್ಲ. '

ಸುಂದರ ' ನಾನೂ ತಮ್ಮಲ್ಲಿ ಅಪರಾಧಿ. ಶಿಕ್ಷೆ ಅನುಭವಿಸಿದರೆ ಅಪ ರಾಧದ ದೋಷ ಹೋಗುತ್ತದೆ. ನೀವು ಒಪ್ಪುವುದಾದರೆ, ಮಗುವನ್ನು ನಾನು ಕರೆದುಕೊಂಡು ಹೋಗುತ್ತೇನೆ. ತನ್ನ ಮಗುವಿನ ಜೊತೆಯಲ್ಲಿ ಇದನ್ನೂ ಸಾಕುವುದು ನನ್ನ ಹೆಂಡತಿಗೆ ಅಷ್ಟೊಂದು ಕಷ್ಟವಾಗಲಾರದು. ಇಷ್ಟಾಯಿತು; ತಮ್ಮ ಹೆಸರು ಗೊತ್ತಾಗಲಿಲ್ಲ. '

' ನನ್ನ ಹೆಸರು ರಾಮಚಂದ್ರಯ್ಯ–ತಮ್ಮ ಕುಟುಂಬಕ್ಕೆ ತೊಂದರೆ ಯಾಗುವುದಿಲ್ಲವೆ ? ಅವರು ಒಪ್ಪುತ್ತಾರೆಯೋ ? '

' ಅದೆಲ್ಲಾ ನಿಮಗೆ ಯಾಕೆ ? ದೊಡ್ಡಮನಸ್ಸು ಮಾಡಿ ನಿಮ್ಮ ಮಗು ವನ್ನು ನನಗೆ ಕೊಡಿ; ದೊಡ್ಡದಾದ ಮೇಲೆ ಕರೆದುಕೊಂಡು ಹೋಗು ವಿರಂತೆ. '

' ದೊಡ್ಡದಾದ ಮೇಲೆ ಮಗು ಸಾಕಿ ಸಲಹಿದವರನ್ನು ಬಿಟ್ಟು ಒರು ವುದುಂಟೆ ? ಆಮೇಲಿನ ಯೋಚನೆ ನೋಡಿಕೊಳ್ಳೋಣ. ನಿಮ್ಮ ಉಪ ಕಾರಕ್ಕೆ ಏನೂ ಪ್ರತ್ಯುಪಕಾರ ಮಾಡಲಾರೆ ನಾನು. '

ರಾಮಚಂದ್ರಯ್ಯ ಆಸ್ಪತ್ರೆಯ ಅಧಿಕಾರಿಗಳಿಗೆ ತಿಳಿಸಿ ಮಗುವನ್ನು ಕರೆದುಕೊಂಡ. ಇಬ್ಬರೂ ಮಗುವಿನೊಡನೆ ಆಸ್ಪತ್ರೆಯನ್ನು ಬಿಟ್ಟರು.

ಸುಂದರ ಒಂದು ಗಾಡಿ ಮಾಡಿದ. ಎಷ್ಟು ಹೇಳಿದರೂ ರಾಮ ಚಂದ್ರಯ್ಯನವರು ಜೊತೆಯಲ್ಲಿ ಬರಲಿಲ್ಲ. ' ಮಗುವನ್ನು ನಿಮ್ಮ ಮಡಿಲಿಗೆ ಹಾಕಿದ್ದಾಯಿತು. ನಿಮ್ಮ ಮನೆ ಸೇರುವ ಹೊತ್ತಿನಲ್ಲಿ ನಾನು ಎದುರಿಗಿರು ವುದು ಬೇಡ. ನಾಳೆ ಬೆಳಿಗ್ಗೆ ಬರುತ್ತೇನೆ, ಮನೆಯ ಗುರುತು ಹೇಳಿ. '

ಸುಂದರ ತನ್ನ ವಿಳಾಸ ಬರೆದು ಕೊಟ್ಟು, ' ನಾಳೆ ಬೆಳಗ್ಗೆ ಅಗತ್ಯವಾಗಿ ಬನ್ನಿ. ನನ್ನ ಮಗುವಿಗೆ ನಾಳೆ ನಾಮಕರಣ. ನಿಮ್ಮ ಮಗುವಿಗೂ ನಾಮ ಕರಣ. ಖಂಡಿತ ಬನ್ನಿ' ಎಂದ.

ಗಾಡಿ ಮುಂದಕ್ಕೆ ಹೋಯಿತು.

ಸುಂದರ ತರಕಾರಿ ಸಾಮಾನು ಮುಂತಾದ್ದು ತರುತ್ತಾನೆಂದು ಸೀತ ಮ್ಮನವರು ಕಾದಿದ್ದರು. ರೈಲಿನಿಂದ ಮಾವನವರು, ತಂದೆ-ತಾಯಿ ಎಲ್ಲರೂ ಬಂದಿದ್ದರು. ಸಾಮಾನಿನ ಬದಲು ಒಂದು ಮಗು ಕಂಡಾಗ ಎಲ್ಲರೂ ಚಕಿತರಾದರು. ಸೀತಮ್ಮನವರು ಮಾತನಾಡಲಿಲ್ಲ. ತಮ್ಮ ಮೌನ ದಲ್ಲೇ ಬೆರಗು, ಆಶ್ಚರ್ಯ, ಪ್ರಶ್ನೆ ಎಲ್ಲವನ್ನು ಅಡಕಮಾಡಿದ್ದರು. ಅಳಿಯ-ದೇವರೆಂದರೆ ಮಾವನವರಿಗೆ ಹೆದರಿಕೆ. ' ಯಾವುದೋ ಇದು ಮಗು, ಎಲ್ಲೀ ಬೊಮಟೆ ? ' ಎಂದು ಕೇಳಿದರು ತಂದೆ.

' ನಮ್ಮ ಸ್ನೇಹಿತರದು. ಇನ್ನೂ ಹದಿನೈದು ದಿನ. ಆಸ್ಪತ್ರೆಯಲ್ಲಿ ತಾಯಿ ತೀರಿಹೋದರು. ತಂದೆಗೆ ಇನ್ನು ಯಾರೂ ದಿಕ್ಕಿಲ್ಲ. ಏನೋ ಮರುಕ ವಾಯಿತು, ಕರೆದುಕೊಂಡು ಬಂದು ಬಿಟ್ಟೆ. ' ಎಂದ ಸುಂದರ.

' ತಬ್ಬಲಿ ' ಎಂದು ಕೇಳಿದೊಡನೆ ಎಲ್ಲರೂ ' ಅಯ್ಯೋ ಪಾಪ ! ' ಎಂದು ಮರುಗಿದರು.

' ಬ್ರಾಹ್ಮಣರು ತಾನೇ ಅವರು ? ' ಎಂದು ಸುಂದರನ ತಾಯಿ ಕೇಳಿದರು.

' ಯಾವ ಜಾತಿಯಾದರೇನಮ್ಮಾ, ಸಣ್ಣಮಗು, ಜಾತಿಯ ಅಂಗಿ ತೊಟ್ಟುಕೊಳ್ಳುವುದು ಬೆಳೆದ ಮೇಲೆ ' ಎಂದು ನಗುತ್ತ, ಪೇಟೆಗೆ ಸಾಮಾನು ತರಲು ಬಂದ ಗಾಡಿಯ ಮೇಲೆ ಹೊರಟ.

ಸುಂದರ ಪೇಟೆಯಿಂದ ಹಿಂದಿರುಗಿದ ಮೇಲೆ, ತಾನು ತಂದ ಮಗು ವನ್ನು ಶಾರದೆಗೆ ಒಪ್ಪಿಸಲು ಅವಳ ಬಳಿ ಹೋದ. ಶಾರದೆ ಮೊದಮೊದಲು ಕೋಪದಿಂದಲೇ ಮಾತಾಡಿದಳು. ಅವಳನ್ನು ಸಮಾಧಾನಪಡಿಸಲು ಸುಂದರ ನಿಗೆ ತುಂಬ ಹೊತ್ತುಹಿಡಿಯಿತು. ಶಾರದೆ ಗುಣಗುಟ್ಟುತ್ತಲೇ ಇದ್ದಳು ' ನಿನಗೇ ಅವಳಿಮಕ್ಕಳಾಗಿದ್ದರೆ ಏನು ಮಾಡುತ್ತಿದ್ದೆ ? ' ಎಂದು ಕೇಳಿದ ಸುಂದರ. ' ಆಗಿಲ್ಲವಲ್ಲ ? ' ಎಂದಳು ಶಾರದೆ.

'ಒಂದು ವೇಳೆ ಆಗಿದ್ದರೆ ?'

'ಆಗಿದ್ದರೆ. . ನಾನೇ ಒಂದು ಮಗುವನ್ನು ಯಾರಿಗಾದರೂ ದಾನ ಮಾಡಿ ಬಿಡುತ್ತಿದ್ದೆ' ಎಂದಳು. ಸುಂದರ ನಕ್ಕ. ಶಾರದೆಯೂ ನಕ್ಕಳು. ಬಿರುಸಿನಿಂದ ಮೊದಲಾದ ವಾಗ್ವಾದ ಸರಸದಲ್ಲಿ ಕೊನೆಗಂಡಿತು.

ಮಾರನೆಯ ದಿನ ಮಧ್ಯಾಹ್ನ ನಾಮಕರಣ. ಸುಂದರನೂ ಶಾರ ದೆಯೂ ಹಸೆಯ ಮೇಲೆ ಕುಳಿತಿದ್ದರು. ಎರಡು ಮಕ್ಕಳನ್ನೂ ಎರಡು ತೊರಗಳಲ್ಲಿ ಮಲಗಿಸಿತ್ತು. ರಾಮಚಂದ್ರಯ್ಯನವರೂ ಬಂದಿದ್ದರು. ಹೆಸರು ಕರೆಯುವ ಸಂದರ್ಭ ಬಂತು. ಮೊದಲು ಗಂಡು ಮಗುವಿಗೆ ಏನು ಹೆಸರು ಇಡುವುದೆಂದು ಪುರೋಹಿತರು ಸುಂದರನನ್ನು ಕೇಳಿದರು. 'ರಾಮಚಂದ್ರ' ಎಂದ ಸುಂದರ. ರಾಮಚಂದ್ರಯ್ಯನವರು ಎದ್ದು ನಿಂತು: 'ಶಾಸ್ತ್ರಿಗಳೇ, ಮಗುವೇನೋ ಈಗ ಸುಂದರರಾಯರದೇ. ಆದರೆ ಅದರ ತಂದೆ ನಾನು ಇಲ್ಲಿರುವುದರಿಂದ ನನ್ನ ಮಾತು ತಾವು ಕೇಳಬೇಕು. ಮಗುವಿಗೆ 'ಸುಂದರ' ಎಂದು ಹೆಸರಿಡಬೇಕು.' ಎಂದು ಹೇಳಿದ. 'ಆಹಾ, ಸರಿಯೇ' ಎಂದು ಶಾಸ್ತ್ರಿಗಳು ಒಪ್ಪಿದರು. ಕುಮುದೆಯ ಮಗುವಿಗೆ ಸುಂದರ ಎಂದು ನಾಮ ಕರಣವಾಯಿತು; ಅವಳ ಆಸೆ ತೀರಿತು ಎಂದು ಸುಂದರನಿಗೆ ಸಂತೋಷ ವಾಯಿತು. ರಾಮಚಂದ್ರಯ್ಯನವರ ಮುಖದಲ್ಲಿ ಒಂದು ಬಗೆಯ ತೃಪ್ತಿ ನೆಲೆಸಿತ್ತು.

ಇನ್ನು ಸುಂದರನ ಹೆಣ್ಣುಮಗುವಿಗೆ ನಾಮಕರಣವಾಗಬೇಕಾ ಯಿತು. ಸುಂದರನ ಅತ್ತೆ ಮಾವ ತಾಯಿ ತಂದೆ ಎಲ್ಲರೂ ಒಪ್ಪಿ, 'ಕಮಲಮ್ಮ' ಎಂದು ಕರೆಯುವುದೆಂದು ನಿರ್ಧರಿಸಿದರು. ಶಾರದೆಗೂ ಅದು ಒಪ್ಪಿತ ವಾಯಿತು. ಶಾಸ್ತ್ರಿಗಳೆ, 'ಮಗುವಿಗೆ ಕಮಲಮ್ಮ ಎಂದು ಹೆಸರಿಡು ವುದು ಎನ್ನುತ್ತಾರೆ ಯಜಮಾನರು. ಆಗಬಹುದು. ತಾನೆ ?' ಎಂದು ಸುಂದರರಾಯರನ್ನು ಕೇಳಿದರು.

ರಾಮಚಂದ್ರಯ್ಯನವರು ಹೇಳಿದರು: 'ನನ್ನದೊಂದು ಸೂಚನೆ ಇದೆ. ಈ ಮಗುವಿಗೆ ಕುಮುದ ಎಂದು ಕರೆಯಬೇಕು.'

'ಅದು ನಿಮಗೆ ಪ್ರಿಯವಾದ ಹೆಸರಿರಬಹುದು. ಆದರೆ ಸುಂದರ ರಾಯರಿಗೆ ಪ್ರಿಯವಾಗಿಲ್ಲದಿರಬಹುದು.' ಎಂದರು ಶಾಸ್ತ್ರಿಗಳು.

'ಇದು ಅವರಿಗೂ ಪ್ರಿಯವಾದ ಹೆಸರೆ.'

'ಇರಬಹುದು. ಮಗುವಿನ ತಂದೆಯನ್ನೇ ಕೇಳುತ್ತೇನೆ.'

'ತಾವು ಕೇಳಬೇಕಾದ ಅಗತ್ಯವಿಲ್ಲ. ಅವರು ಒಪ್ಪಿದ್ದಾರೆ.'

'ಏನು ಸುಂದರರಾಯರೆ?' ಎಂದು ಸುಂದರನನ್ನು ಪ್ರಶ್ನಿಸಿದರು ಶಾಸ್ತ್ರಿಗಳು.

'ಹಿರಿಯರೆಲ್ಲ ಒಪ್ಪಿದರೆ ಆಗಬಹುದು.' ಎಂದ ಸುಂದರ.

'ಆಗಬಹುದೋ?' ಎಂದು ಶಾಸ್ತ್ರಿಗಳು ಹಿರಿಯರ ಅಪ್ಪಣೆ ಕೇಳಿದರು; ಹಿರಿಯರು ಅನುಮಾನಿಸಿದರು; ಶಾಸ್ತ್ರಿಗಳು, ಕಮಲಕ್ಕೂ ಕುಮುದಕ್ಕೂ ಅಷ್ಟೇನೂ ವ್ಯತ್ಯಾಸವಿಲ್ಲವೆಂದೂ, ಎರಡೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಜಾತಿಯ ಹೂವೆಂದೂ, ಅರಳುವ ಹೊತ್ತು ಮತ್ತು ಬಣ್ಣ ಮಾತ್ರ ಬೇರೆ ಬೇರೆ ಎಂದೂ ಸಮಾಧಾನವನ್ನೂ ಹೇಳಿದರು. ಎಲ್ಲರೂ ಒಪ್ಪಿದರು.

ಸುಂದರನ ಮಗುವಿಗೆ 'ಕುಮುದ' ಎಂದು ನಾಮಕರಣವಾಯಿತು.

ರಾಮಚಂದ್ರಯ್ಯನವರು ಮನೆಗೆ ಹೋಗುವಾಗ ಸುಂದರನೊಡನೆ, ಕಂಬನಿ ಮಿಡಿದು; 'ಕುಮುದ ಸತ್ತಿಲ್ಲ, ನಿಮ್ಮ ಪಾಲಿಗೆ ಬದುಕಿ ಬಂದಿದ್ದಾಳೆ' ಎಂದರು.

'ನಿಮ್ಮ ಔದಾರ್ಯ' ಎಂದ ಸುಂದರ. ಅವನ ಕಣ್ಣಿನಲ್ಲೂ ನೀರು ಪೂರೆಗಟ್ಟಿತ್ತು.



# ಮನೋಹರ ಗ್ರಂಥಮಾಲೆಯಲ್ಲಿ ಇದುವರೆಗೆ ಅರಳಿದ ಕುಸುಮಗಳು

| | | |
|---|---|---|
| *೧ ಸುದರ್ಶನ | ಕಾದಂಬರಿ | ೦ ೧೨ ೦ |
| *೨ ಸವಿಲುಗರಿ | ಕತೆಗಳ ಸಂಗ್ರಹ | ೦ ೧೨ ೦ |
| *೩ ತ್ರಿಪುರದಹನ | ವಿಚಾರಾತ್ಮಕ ಗ್ರಂಥ | ೦ ೧೨ ೦ |
| *೪ ಬಾಳುರಿ | ಕಾದಂಬರಿ | ೦ ೧೨ ೦ |
| *೫ ಬ್ರಾಹ್ಮಣರ ಹುಡುಗಿ | ಕಾದಂಬರಿ | ೦ ೧೨ ೦ |
| *೬-೭ ವಿಶ್ವಾಮಿತ್ರನ ಸೃಷ್ಟಿ | ಕಾದಂಬರಿ | ೧ ೧೨ ೦ |
| *೮ ಜೀವನ | ಕತೆಗಳ ಸಂಗ್ರಹ | ೦ ೧೨ ೦ |
| ೯ ಕಾಳರಾತ್ರಿ | ಆಧ್ಯಾತ್ಮಿಕ ಕಾದಂಬರಿ | ೦ ೧೨ ೦ |
| ೧೦ ಧರ್ಮಸೆರೆ | ಕಾದಂಬರಿ | ೦ ೧೪ ೦ |
| *೧೧ ರಾಜಯೋಗಿ | ಐತಿಹಾಸಿಕ ಕಾದಂಬರಿ | ೦ ೧೪ ೦ |
| ೧೨ ಕೋಲ್ಮಿಂಚು | ಏಕಾಂಕ ಸಂಗ್ರಹ | ೧ ೦ ೦ |
| ೧೩-೧೪ ಇಜ್ಜೋಡು | ಕಾದಂಬರಿ | ೧ ೮ ೦ |
| ೧೫ ಕುರಿಹಿಂಡು | ಸಚಿತ್ರ ವಿಡಂಬನಗಳು | ೧ ೦ ೦ |
| ೧೬ ಧೂಮಕೇತು | ಕಾದಂಬರಿ | ೦ ೧೪ ೦ |
| ೧೭ ಧರ್ಮಜ್ಯೋತಿ | ವಿಚಾರಾತ್ಮಕ ಗ್ರಂಥ | ೧ ೪ ೦ |
| ೧೮ ಸೇವಾಪ್ರದೀಪ | ಐತಿಹಾಸಿಕ ನಾಟಕ | ೦ ೧೨ ೦ |
| ೧೯ ದಿಲ್ಲೀಶ್ವರನ ದಿನಚರಿ | ಚಾರಿತ್ರಿಕ ಗ್ರಂಥ | ೦ ೧೨ ೦ |
| *೨೦ ಪುಷ್ಪಮಾಲೆ | ಕತೆಗಳ ಸಂಗ್ರಹ | ೦ ೧೨ ೦ |
| ೨೧ ಸೋಲೋ ಗೆಲುವೋ | ನೀಳ್ಗತೆಗಳು | ೦ ೧೨ ೦ |
| ೨೨ ಹಳ್ಳಿಯ ಸಮಾಜ | ಕಾದಂಬರಿ | ೦ ೧೪ ೦ |
| ೨೩ ಪಾವನಪಾವಕ | ಸ್ವಪ್ನದೃಶ್ಯಗಳು | ೦ ೮ ೦ |
| ೨೪ ಸಮುದ್ರದಾಚೆಯಿಂದ ಭಾಗ ೧ | ದಿನಚರಿ | ೧ ೦ ೦ |
| ೨೫ ಸರಸಮ್ಮನ ಸಮಾಧಿ | ಕಾದಂಬರಿ | ೦ ೧೨ ೦ |
| ೨೬-೨೭ ಎರಡು ಧ್ರುವ | ಕಾದಂಬರಿ | ೨ ೦ ೦ |
| ೨೮ ಸಮುದ್ರದಾಚೆಯಿಂದ ಭಾಗ ೨ | ದಿನಚರಿ | ೧ ೦ ೦ |

| | | |
|---|---|---|
| ೨೯ ಹೂಬಾಣಗಳು | ನಗೆಬರೆಹಗಳು | ೧ ೮ ೦ |
| ೩೦ ಮಹಾಪೂರ | ಕಾದಂಬರಿ | ೦ ೧೨ ೦ |
| ೩೧ ಸಂಧ್ಯಾರಾಗ | ಕಾದಂಬರಿ | ೧ ೦ ೦ |
| ೩೨-೩೩ ಪ್ರೇಮಾಹುತಿ | ಕಾದಂಬರಿ | ೧ ೮ ೦ |
| ೩೪ ಜನನಾಯಕ | ನಾಟಕ | ೦ ೧೪ ೦ |
| ೩೫ ಸುಳುವು-ಹೊಳವು | ಹರಟೆಗಳು | ೧ ೦ ೦ |
| ೩೬ ಕಾರಣಪುರುಷ | ಕಾದಂಬರಿ | ೧ ೦ ೦ |
| ೩೭ ಹತ್ತು ವರುಷ | ಆತ್ಮಚರಿತ್ರ | ೧ ೦ ೦ |
| ೩೮ ತುಟಿಮೀರಿದುದು | ಹಾಸ್ಯಪ್ರಬಂಧಗಳು | ೦ ೧೪ ೦ |
| ೩೯-೪೦ ಭಾರತ ಮಾರ್ಗ | ಕಾದಂಬರಿ | ೨ ೮ ೦ |
| ೪೧ ಗ್ರಾಮಪಂಚಾನನ | ಕಾದಂಬರಿ | ೦ ೧೨ ೦ |
| ೪೨ ಮಾರ್ಗದರ್ಶಕ | ಸಣ್ಣ ಕತೆಗಳು | ೦ ೧೪ ೦ |
| ೪೩ ಮೂಕಬಲಿ | ಕಾದಂಬರಿ | ಅಚ್ಚಿನಲ್ಲಿ |

**ಬಿಡಿ ಮುತ್ತುಗಳು**

| | | |
|---|---|---|
| ೧ ಸಾಹಿತ್ಯ ಮತ್ತು ವಿಮರ್ಶೆ | ಶ್ರೀ. ದ. ರಾ. ಬೇಂದ್ರೆ | ೦ ೧೨ ೦ |
| ೨ ಪಯಣ (ಕವನಸಂಗ್ರಹ) | ಶ್ರೀ. ವಿನಾಯಕ | ೦ ೧೨ ೦ |
| ೩ ತಿರುಪಾಣಿ (ಗೀತಪ್ರಧಾನ ನಾಟಕ) | ‘ಶ್ರೀನಿವಾಸ’ | ೦ ೮ ೦ |
| ೪ ಸಖೀ ಗೀತ | ,, | ೧ ೦ ೦ |
| ೫ ಸಾಹಿತ್ಯ-ಸಂಶೋಧನ | ಶ್ರೀ. ದ. ರಾ. ಬೇಂದ್ರೆ | ಅಚ್ಚಿನಲ್ಲಿ |
| ೬ ಸಿರಾಭರಣ ಸುಂದರಿ | ,, | ,, |
| ೭ ವ್ಯಕ್ತಿ–ವಿಮರ್ಶೆ–ವಿಚಾರ | ,, | ,, |
| ೮ ಇತ್ಯಾದಿ. | ,, | ,, |

---

ಗುರುತಿನ ಪುಸ್ತಕಗಳು ತೀರಿವೆ.

—